# ಕೊಡಗು ಸಂಗಾತಿ

ಅಕ್ಟೋಬರ್ 1 ರಿಂದ 31, 2003 ಪಾಕ್ಷಿಕ ಪತ್ರಿಕೆ ( ನಿರ್ನಾಲ್ 14-30, ಬೊಂತೆಲ್ 1-14 )

12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

RNo. : KA/SK/MYS-88/2003 ಸಂಪುಟ : 7 ಸಂಚಿಕೆ : 13-14 ಪುಟಗಳು : 24 ಬೆಲೆ ರೂ. : 12-00



ಚಿತ್ರ : ಕೊಡಗು ಸಂಗಾತಿ : ಲೇಖನ ಒಳಪುಟದಲ್ಲಿ

## 1835-37 ರಲ್ಲಿ ಕೊಡಗಿನ ಮಣ್ಣಿನಲ್ಲಿ ಪ್ರಥಮ ಸ್ವಾತಂತ್ರ್ಯದ ಕಿಡಿ ಕಾರಿದ ದಿ|| ಸುಭೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರು (1793-1837)

ಧರ್ಮೋರಕ್ಷತಿ ರಕ್ಷಿತಃ

ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರಿಯಸಿ

# ಹಿಂದೂ ವಿಜಯ

ದೂರವಾಣಿ ೨೨೧೬೭೫ ೨೨೩೬೭೫

ಸಂಪಾದಕ ಚಿ.ನಾ. ಸೋಮೇಶ್

## ರಾಷ್ಟ್ರೀಯ ವಿಚಾರವಾದಿಯ ಕೊಡಗಿನ ಏಕೈಕ ಸಾಪ್ತಾಹಿಕ ಪತ್ರಿಕೆ

ದೇಶದ ವಿಚಾರವಂತರು ಓದಿ ಅರಗಿಸಿಕೊಳ್ಳುವ ಪತ್ರಿಕೆ. ಭಾರತೀಯರ ಅರಿಯು ತಿಳಿಯುವಿನ ಏಕೈಕ ಸಾಪ್ತಾಹಿಕವಾಗಿ ಮಡಿಕೇರಿಯಿಂದ ಪ್ರಕಟಿತ. ರಾಷ್ಟ್ರೀಯ ಚಿಂತನವಾದಿ ಚಿ. ನಾ. ಸೋಮಶೇಖರ್‌ನವರ ನೇತೃತ್ವದ ಪತ್ರಿಕೆ. ಆಸಕ್ತರು ಸದಸ್ಯರಾಗಿ ಕೊಂಡು ಓದಲು ಮರೆಯದಿರಿ. ವಿಳಾಸ : ಸಂಪಾದಕರು, ಹಿಂದೂ ವಿಜಯ, ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ, ಮಡಿಕೇರಿ - 571 201, ನಗದು / ಡಿ.ಡಿ./ಎಂ. ಓ/ ಮೂಲಕ ಸದಸ್ಯತನ ಹಣ ಸ್ವೀಕರಿಸಲಾಗುವುದು.

*ಚಂದಾದಾರರಾಗಿ : ವಾರ್ಷಿಕ ರೂ. ೨೦೦ , ೫ ವರ್ಷಕ್ಕೆ ರೂ. ೧೦೦೦, ಆಜೀವ ರೂ. ೨೦೦೦*

ದೂರವಾಣಿ : **08272/221675 , 223675**

## ಮೈಸೂರು ಗೌಡ ಮಹಿಳೆಯವರಿಂದ ಪ್ರವಾಸ

ಕೊಡಗು ಮತ್ತು ದ.ಕ. ಗೌಡ ಮಹಿಳಾ ಒಕ್ಕೂಟ ವತಿಯಿಂದ ನವೆಂಬರ್ ತಿಂಗಳ ತಾ. 9 ರಂದು ಶಿಂಷಾ, ಸೋಮನಾಥಪುರ ಹಾಗೂ ತಲಕಾಡಿಗೆ ಪ್ರವಾಸ ಹೋಗುವುದೆಂದು ನಿರ್ಧರಿಸಲಾಗಿದೆ. ಆಸಕ್ತರು ಅಕ್ಟೋಬರ್ ತಿಂಗಳ ತಾ. 20 ರೊಳಗೆ ಕೊಡಗು ಸಂಗಾತಿ 2404290, ಕೂಡಕಂಡಿ ಲಲಿತಾ ಸೋಮಣ್ಣ 2341424 ಮತ್ತು ದಂಬೆಕೋಡಿ ಭಾಗೀರಥಿ - 2545595 ಇವರನ್ನು ಸಂಪರ್ಕಿಸಿ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳುವುದು ಹಾಗೂ ಸರ್ವ ಸದಸ್ಯರು ಸಹಕರಿಸುವಂತೆ ವಿನಂತಿಸಲಾಗಿದೆ.

| ಕೂಡಕಂಡಿ ಲಲಿತಾ<br>ಅಧ್ಯಕ್ಷೆ | ಪಟ್ಟಡ ಶೀಲಾಮಣಿ<br>ಉಪಾಧ್ಯಕ್ಷೆ | ದಂಬೆಕೋಡಿ ಭಾಗೀರಥಿ<br>ಗೌರವಾಧ್ಯಕ್ಷೆ | ಹಾಗೂ ಕಾರ್ಯಕಾರಿ<br>ಮಂಡಳಿ ಸದಸ್ಯೆಯರು. |
|---|---|---|---|

## ಅ. 18 ರ ಬೆಳಿಗ್ಗೆ 7.28 ಘಂಟೆಗೆ ತಲಕಾವೇರಿಯಲ್ಲಿ ತೀರ್ಥೋದ್ಭವ



ಕನ್ನಡ ನಾಡಿನ ಜೀವನದಿ ಕಾವೇರಿಯ ಉಗಮ ಸ್ಥಾನವಾದ ತಲಕಾವೇರಿಯಲ್ಲಿ ಈ ವರ್ಷ ಅಕ್ಟೋಬರ್ 18 ರಂದು ಶನಿವಾರ ಬೆಳಿಗ್ಗೆ 7.28 ಗಂಟೆಗೆ ತುಲಾ ಲಗ್ನದಲ್ಲಿ ಶ್ರೀ ಕಾವೇರಿ ತೀರ್ಥೋದ್ಭವವಾಗಲಿದ್ದು, ಮಾತೆ ಕಾವೇರಿ ತೀರ್ಥ ರೂಪಿಣಿಯಾಗಿ ಆವಿರ್ಭವಿಸಲಿರುವದಾಗಿ ಧಾರ್ಮಿಕ ದತ್ತಿ ಇಲಾಖೆಯ ಹಿರಿಯ ಆಗಮ ಪಂಡಿತರು ಖಚಿತಪಡಿಸಿದ್ದಾರೆ.

ಈ ಕುರಿತು ಪತ್ರಿಕಾ ಪ್ರಕಟಣೆ ನೀಡಿರುವ ಜಿಲ್ಲಾಧಿಕಾರಿ ಶ್ರೀಕಾಂತ್ ವಾಲಗದ್ ಅವರು, ಸ್ವಭಾನು ಸಂವತ್ಸರದ ಇದೇ ಸೆಪ್ಟಂಬರ್ 27 ರಂದು ಬೆಳಿಗ್ಗೆ 9-15 ಗಂಟೆಗೆ ಪತ್ತಾಯಕ್ಕೆ ಅಕ್ಕಿ ಹಾಕುವುದು, ಅಕ್ಟೋಬರ್ 5ರಂದು ಬೆಳಿಗ್ಗೆ 10-30 ಗಂಟೆಗೆ ಆಜ್ಞಾ ಮುಹೂರ್ತ, ತಾ. 15 ರಂದು ಬೆಳಿಗ್ಗೆ 11-30 ಗಂಟೆಗೆ ಅಕ್ಷಯಪಾತ್ರೆ ಇಡುವದು, ಅದೇ ದಿನ ಸಂಜೆ 4-40 ಗಂಟೆಗೆ ಶುಭ ಕುಂಭ ಲಗ್ನದಲ್ಲಿ ಕಾಣಿಕೆ ಪೆಟ್ಟಿಗೆಗಳನ್ನು ಇಡಲಾಗುವುದು ಎಂದು ತಿಳಿಸಿದ್ದಾರೆ.

## 4 ನೇ ವರ್ಷದ ಪುಣ್ಯ ಸ್ಮರಣೆ



ನೀವು ನಮ್ಮನ್ನಗಲಿ ಇಂದಿಗೆ 4 ವರ್ಷಗಳು ಸಂದರೂ ನಿಮ್ಮ ನೆನಪು ನಮ್ಮಲ್ಲಿ ಸದಾ ಹಸಿರಾಗಿದೆ. ನಿಮ್ಮ ದಿವ್ಯಾತ್ಮಕ್ಕೆ ಭಗವಂತನು ಚಿರಶಾಂತಿ ನೀಡಲೆಂದು ಪ್ರಾರ್ಥಿಸುವ,

*ಪತ್ನಿ :ಚಿಣ್ಣಮ್ಮ, ಪುತ್ರ ಚಂದ್ರಶೇಖರ್, ಸೊಸೆ ರತಿ ಮತ್ತು ಅಳಿಯಂದಿರು, ಮೊಮ್ಮಕ್ಕಳು ಮತ್ತು ಮರಿಮಕ್ಕಳು*

ದಿ. ಪಾಂಡನ ಜಿ. ಸೋಮಪ್ಪ

ಜನನ : **14-11-1918** ಮರಣ : **14-9-1999**

## ಪ್ರಥಮ ವರ್ಷದ ಪುಣ್ಯಸ್ಮರಣೆ



ನೀವು ನಮ್ಮನ್ನಗಲಿ ಇಂದಿಗೆ ಒಂದು ವರ್ಷ ಕಳೆದರೂ ನಿಮ್ಮ ನೆನಪು ನಮ್ಮ ಮನದಲ್ಲಿ ಅಚ್ಚಳಿಯದೆ ಉಳಿದಿದೆ. ನಿಮ್ಮ ಆದರ್ಶಗುಣಗಳು ಸದಾ ನಮಗೆ ದಾರಿದೀಪವಾಗಿದೆ. ನಿಮ್ಮ ದಿವ್ಯಾತ್ಮಕ್ಕೆ ಭಗವಂತನು ಚಿರಶಾಂತಿಯನ್ನು ಕರುಣಿಸಲೆಂದು ಪ್ರಾರ್ಥಿಸುವ.

*ಪತ್ನಿ : ಜಯಂತಿ, ಮಕ್ಕಳು, ಮೊಮ್ಮಕ್ಕಳು ಹಾಗೂ ಸೊಸೆಯಂದಿರು*

ದಿ. ಪೊಡನೋಳನ ಬಿ. ಬೆಳ್ಯಪ್ಪ

ನಿಧನ : 7-9-2002

ದೂರವಾಣಿ : 08276/273171

## 2003, ಅಕ್ಟೋಬರ್ 1 ರಿಂದ 31ರ ತನಕ

## ಒಳನೋಟ




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ ಮತ್ತು ಕೋರಿಯರ್ ಸರ್ವಿಸ್ ಇತ್ಯಾದಿ | ಕೊಡಗು ಸಂಗಾತಿ, 12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನಕಲ್ ಅಂಚೆ, ಮೈಸೂರು - 17. ಫೋನ್: **0821/2404290** |
| | ಕುಂಟುಪುಣಿ ರಾಮಕೃಷ್ಣ, ಕಾವೇರಿ ಆಟೋಮೊಬೈಲ್, ರಿಂಗ್ ರೋಡ್ ಸರ್ಕಲ್, ಹಿನಕಲ್ ಅಂಚೆ, ಮೈಸೂರು - 17 **Mobile : 94480-87790** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ ಪುಸ್ತಕ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಇತ್ಯಾದಿಗಳು | ಕೊಡಗು ಸಂಗಾತಿ C/o ಪಾಂಡನ ಕಾಂಪೌಂಡ್, 21/4, (1), ಅಪ್ಪಯ್ಯ ಗೌಡ ರಸ್ತೆ, ಜೂನಿಯರ್ ಕಾಲೇಜು ಹತ್ತಿರ, ಮಡಿಕೇರಿ - 571 201 ಪಾಂಡನ ರತಿ ಚಂದ್ರಶೇಖರ್/ ಫೋನ್ : **228380**<br>ಬೈತಡ್ಕ ಜಾನಕಿ ಬೆಳ್ಯಪ್ಪ ಫೋನ್ : **228047** |
| ವಿರಾಜಪೇಟೆ | ಬಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/456591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/673370 |
| ಬೆಂಗಳೂರು ಮಹಾನಗರ | ನಂಗಾರು ಮೋದನ ಪ್ರಿಯ, ನಂ. 11, ಮೊದಲನೆ ಅಡ್ಡ ರಸ್ತೆ, ಪೆಮ್ಮಯ್ಯ ಬ್ಲಾಕ್, ಜೇಸಿನಗರ, ಬೆಂಗಳೂರು -560 006 Mobile : 94482 25160 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **12**ರೂ.

ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಕೊಡಗಿನ ಪ್ರಥಮ ಸ್ವಾತಂತ್ರ್ಯ ಹೋರಾಟ - ಹುತಾತ್ಮ ದಿನವಾಗಿ ಆಚರಿಸಲ್ಪಡಲಿ.

ದಿನಾಂಕ 31-10-1837 ರಂದು ಕೊಡಗಿನ ಚರಿತ್ರೆಯಲ್ಲಿ ಬಹು ಕರಾಳ ದಿನ. ಒಬ್ಬ ಸೈನಿಕ ದೇಶಪ್ರೇಮಿ, ಸ್ವಾಮಿ ಭಕ್ತನಾಗಿ ಬ್ರಿಟಿಷರ ಒಡೆದು ಆಳುವ ನೀತಿಗೆ ಬಲಿಯಾಗಿ-ದೇಶಕ್ಕಾಗಿ ತ್ಯಾಗ ಮಾಡಿ ನೇಣುಗಂಬಕ್ಕೆ ಏರಿದ ಪ್ರಸಂಗ ಕೊಡಗಿನಲ್ಲಿ ನಡೆಯಿತೆನ್ನುವುದು ವಿಷಾದನೀಯ. ಹಿಂದೆ 1834 ರ ತನಕ ಕೊಡಗನ್ನು ಆಳಿದ ಹಾಲೇರಿ ವಂಶದ ಕೊನೆಯರಾಜ ಚಿಕ್ಕವೀರರಾಜೇಂದ್ರ ಒಡೆಯರ್ ನಾಗಿದ್ದನು. ಅಂದು ಕೊಡಗಿನಲ್ಲಿ ಕೆಲವು ಕುತಂತ್ರಿಗಳು ಮಾಡಿದ ನೀಚ ಕಾರ್ಯದಿಂದ ಬ್ರಿಟಿಷರು ಕೊಡಗಿನ ಮಣ್ಣಿನಲ್ಲಿ ಕಾಲಿಡುವಂತಾಯಿತು. ಕುತಂತ್ರದಿಂದಲೇ ಚಿಕ್ಕವೀರರಾಜೇಂದ್ರನು ಪದಚ್ಯುತನಾದನು. ರಾಜನಿಗೆ ಅರ್ಥವಾಗುವ ಹೊತ್ತಿಗೆ ಕಾಲ ಮೀರಿತ್ತು. ರಾಜನ ಆಸ್ಥಾನದಲ್ಲಿ ಹಲವರು ಗುಪ್ತ ಕಾರ್ಯ ನಡೆಸುತ್ತಿದ್ದರು. ಕೆಲವರು ರಾಜ ಗದ್ದುಗೆಯ ಮೇಲೆ ಕಣ್ಣಿಟ್ಟಿದ್ದರು ಸಹ ಏನೂ ಮಾಡಲಾಗದ ಪರಿಸ್ಥಿತಿ. ಅಂತೂ ಇಂತೂ ಕಾಶೀ ಯಾತ್ರೆಯ ನೆಪದಲ್ಲಿ ಕೊಡಗಿನಿಂದ ಹೊರಗಟ್ಟಿದರು.

ರಾಜನು ಕೊಡಗಿನ ಗಡಿಭಾಗ ಕುಶಾಲನಗರದಲ್ಲಿ ನದಿಯನ್ನು ದಾಟುವ ಸಂದರ್ಭದಲ್ಲಿ ತನ್ನ ನಿಷ್ಠರಾದ ಕೆಲವು ಆಪ್ತರಿಗೆ ನನ್ನ ನಂತರ ಹೇಗಾದರು ಕೊಡಗಿನ ಉಳಿಯುವಿಗಾಗಿ ಹೋರಾಡಬೇಕೆಂದು ತಿಳಿಸಿ ಪಯಣಿಸಿದರು. ಆ ಆಪ್ತರಲ್ಲಿ ಗುಡ್ಡೆಮನೆ ಸುಬೇದಾರ್ ಅಪ್ಪಯ್ಯ ಗೌಡರು ಒಬ್ಬರಾಗಿದ್ದರು. ಇವರೇ ಮುಂದೆ ಕೆನರಾ ಬಂಡಾಯದ ಮುಖ್ಯ ಸೇನಾಧಿಪತಿಯಾಗಿ ಕಾರ್ಯ ನಿರ್ವಹಿಸಿದವರು. ರಾಜನ ಪದಚ್ಯುತಿ ಸ್ವಾಮಿನಿಷ್ಠೆ ಜನರಿಗೆ ಸಿಹಿ ಸುದ್ದಿಯಾಗಿರಲಿಲ್ಲ. ಒಳಗೊಳಗೆ ಬ್ರಿಟಿಷರ ವಿರುದ್ಧ ಜನ ಸಂಘಟನೆಯಾಗುತ್ತಲಿತ್ತು. ಕಾರಣ ರಾಜನು ಅತೀ ಕೆಟ್ಟವನೆಂದು, ದುರಾಚಾರನೆಂತಲೂ, ಕಟುಕನೆಂತಲೂ, ಲೋಲುಗಾರನೆಂತಲೂ, ಸ್ತ್ರೀ ವ್ಯಾಮೋಹಿಯಾಗಿ ತನ್ನ ತಂಗಿಯನ್ನೆ ಮೋಹಿಸಿದನೆಂತಲೂ ಪಿತೂರಿ ನಡೆಸಲಾಯಿತು. ಇವೆಲ್ಲದರ ಪರಿಣಾಮವೇ ಬ್ರಿಟಿಷರ ಆಗಮನ.

ಕೊಡಗಿನ ರಾಜನು ಕೆಟ್ಟವನಿದ್ದಿದ್ದರೆ ಪುನಹ ರಾಜನ ಆಗಮನಕ್ಕಾಗಿ 1837ರ ಕೆನರಾ ಬಂಡಾಯ ದಂಗೆಯು ಖಂಡಿತವಾಗಿಯೂ ನಡೆಯುತ್ತಿತ್ತೊ ಇಲ್ಲವೊ ಏನೊ? ಹಲವರಿಗೆ ರಾಜ ಒಳ್ಳೆಯವನಿದ್ದರೆ ಕೆಲವರಿಗೆ ರಾಜ ಕೆಟ್ಟವನಿರಬಹುದು. ಅದು ಪ್ರಕೃತಿ ನಿಯಮ. ಇನ್ನೊಂದು ವಿಶೇಷತೆಯೆಂದರೆ 1837 ರ ದಂಗೆಯು ಪಿರಿಯಾಪಟ್ಟಣದಿಂದ ಪಾಣೆ ಮಂಗಳೂರು ತನಕದ ವ್ಯಾಪ್ತಿಯಲ್ಲಿ ಬರುವ ಅಂದಿನ ವಿಶಾಲ ಕೊಡಗಿನ ಎಲ್ಲಾ ವರ್ಗದ ಜನರು ಪಾಲ್ಗೊಂಡಿದ್ದರು ಯೋಧರ ದಂಗೆಯಲ್ಲಿ ಪಾಲ್ಗೊಂಡು ಪೂರ್ಣ ಸಹಕರಿಸಿದ್ದರೆ ಕೊಡಗಿನಿಂದ ಬ್ರಿಟಿಷರನ್ನು ಹತ್ತಿಕ್ಕುವುದು ಅಂದು ಕಠಿಣವಾಗಿರಲಿಲ್ಲ. ಕಠಿಣ ಪರಿಸ್ಥಿತಿಯಲ್ಲಿ 25,000 ಶಸ್ತ್ರ ಸಜ್ಜಿತರಾದ ಸೈನಿಕರನ್ನು ಜಮಾಯಿಸುವಷ್ಟು ರಾಜ ಸಮರ್ಥನಾಗಿದ್ದನು ಎಂದು ಒಂದು ಕಡೆ ದಾಖಲಾಗಿದ್ದುದನ್ನು ಅವಲೋಕಿಸಿದರೆ ಸಂಚಿನ ಗಾಡವೆಷ್ಟೆಂದು ಊಹೆಗೆ ನಿಲುಕದಷ್ಟು ದೊಡ್ಡದು.

ಹಿಂದಿನ ಕಾಲದಲ್ಲಿ ರಾಜನ ಅಭಿಪ್ರಾಯಗಳಿಗೆ ಅಡ್ಡಪಡಿಸಿದವರನ್ನು ನಿರಂಕುಶ ರಾಜರು ನಿರ್ಭಯವಾಗಿ ದಂಡಿಸುತ್ತಿದ್ದರು. ರಾಜ ಗದ್ದುಗೆಗೆ ಕಣ್ಣಿಟ್ಟಾಗ ರಾಜನಾದವನ ರಾಜ ಕರ್ತವ್ಯವನ್ನು ಚಿಕ್ಕವೀರರಾಜ ಮಾಡಿದ. ಇಂತಹ ವಿಷಯಗಳನ್ನೆಲ್ಲಾ ತಮಗೆ ಬೇಕಾದಂತೆ ತಿರುಚಿ ಮುರುಚಿ ದಾಖಲಿಸಿರುವುದು ಬಹಳ ವಿಷಾದ ಸಂಗತಿ. 1837 ಕೆನರಾ ಬಂಡಾಯವೆಂದು ಬ್ರಿಟಿಷರೆ ದಾಖಲಿಸಿದರೆ ಕೊಡಗಿನ ಸ್ವಾತಂತ್ರ್ಯ ಪೂರ್ವ ಇತಿಹಾಸಕಾರರು ಅಮರ-ಸುಳ್ಯ ಕಾಟಕಾಯಿಯೆಂತಲೂ, ಪುಂಡರ ದಂಗೆಯೆಂದು ಹಣೆಪಟ್ಟಿ ಹಚ್ಚಿ ಕೈ ಚೆಲ್ಲಿ ಕುಳಿತದ್ದು ಕೊಡಗಿನ ಜನತೆಗೆ ಶೋಭೆಯಲ್ಲ. ಅಂತೆಯೇ ಜನವರ್ಗಕ್ಕೆ ಬಗೆದ ದ್ರೋಹವಾಗಿದೆ.

ಕೊಡಗಿನ ಸಂಗ್ರಾಮದಲ್ಲಿ ಪಾಲ್ಗೊಂಡು ಅದೆಷ್ಟು ಮಂದಿ ತಮ್ಮ ಪ್ರಾಣವನ್ನೇ ಕೊಟ್ಟಿದ್ದಾರೆ. ಅಪರಂಪರಾನಂದ ಮತ್ತು ಕಲ್ಯಾಣ ಸ್ವಾಮಿ (1835-37) ಬ್ರಿಟಿಷರನ್ನು ಎದುರಿಸಿ ಸುಳ್ಯ, ಪುತ್ತೂರು, ಬಂಟವಾಳ, ಮಂಗಳೂರು, ಕಾಸರಗೋಡು ಇಲ್ಲೆಲ್ಲ ಪ್ರತಿ ಸರ್ಕಾರ ರಚಿಸಿ, 13 ದಿನಗಳ ತನಕ ಮಂಗಳೂರಿನಿಂದ ಆಳಿದರು. ಪುಟ್ಟ ಬಸಪ್ಪ, ಬಂಗಡಿ ರಾಜಕುಮಾರ, ಗುಡ್ಡೆಮನೆ ಅಪ್ಪಯ್ಯ ಗೌಡ ಎಲ್ಲಾ ಸೇರಿ ಸರ್ಕಾರವನ್ನೇ ಕೆಲಕಾಲ ಸ್ಥಗಿತಗೊಳಿಸಿದರು. ಈ ಮೂವರು ಮುಖ್ಯಸ್ಥರನ್ನು ಸೆರೆಹಿಡಿದು ಪಾಸಿಗೆ ಹಾಕಿದರು. ಇವರಂತೆಯೇ ಕಲ್ಯಾಣಸ್ವಾಮಿ, ಕೆದಂಬಾಡಿ ರಾಮಗೌಡ, ಅಡ್ಕಾರು ಅಂಣೆ ಗೌಡರನ್ನು ಮಂಗಳೂರಿನ ಬಿಕ್ರಾನ ಕಟ್ಟೆ ಎಂಬಲ್ಲಿ ಪಾಸಿಗೆ ಕೊಟ್ಟರು. ಸೆರೆ ಸಿಕ್ಕಿದ ಚೆಟ್ಟಿ ಕುಡಿಯ, ಕುರ್ತು ಕುಡಿಯ, ಶಾಂತಳ್ಳಿ ಮಲ್ಲಯ್ಯ, ಪೆರಾಜೆಯ ಪಾರಪತ್ಯಗಾರ ಕೃಷ್ಣಯ್ಯ ನಾಲ್ಕು ನಾಡಿನ ಮತ್ತು ಮಂಡೀರ ಉತ್ತು ಇನ್ನು ಹಲವರನ್ನು ಜೀವಾವಧಿ ಶಿಕ್ಷೆ ನೀಡಿ ಸಿಂಗಾಪುರ ಹಾಗೂ ಕಲ್ಲಿಕೋಟೆಗೆ ಕಳುಹಿಸಿದರು. ಇಂತಹ ಸಮಗ್ರ ವಿಚಾರಗಳು, ಜನರ ದೇಶಪ್ರೇಮವಾಗಲಿ ಎಲ್ಲೂ ಚಕಾರ ವೆತ್ತಿರುವುದಿಲ್ಲ ಅಂದು ದಾಖಲಿಸಿದ ದಾಖಲೆಗಳು.

ಹಿಂದಿನ ನಮ್ಮ ಪೂರ್ವಜರು ಬಾಯಿಂದ ಬಾಯಿಗೆ, ತಂದೆಯಿಂದ ಮಗನಿಗೆ ವಿಚಾರವನ್ನು ರವಾನಿಸುತ್ತಿದ್ದು ಅನುವಂಶಿಯವಾಗಿ ನಡೆದು ಬರುತ್ತಿತ್ತು. ಅವುಗಳ ನಂತರ ಭಾಷೆ, ಸಂಸ್ಕೃತಿ, ಸಂಸ್ಕಾರ ಪದ್ಧತಿ, ಆಚಾರ, ವಿಚಾರ, ಕಟ್ಟ್‌ಪಾಡ್ ಗಳೆಂದು ಬಳುವಳಿಯಾಗಿ ಬಂದದ್ದು. ಅಂತೆಯೇ ಈ ಸಂಗ್ರಾಮದ ಬಗ್ಗೆ ಅಲ್ಲಲ್ಲಿ ಕೇಳಿ ಬರುವ ವಿಚಾರಗಳ ಮಾಹಿತಿ ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಹೊರತಂದರೆ ಒಳಿತು. ಕೊಡಗಿನ ಇತಿಹಾಸವು ಎಲ್ಲೊ ನಿಗೂಡತೆಯನ್ನು ಬಚ್ಚಿಟ್ಟಿದೆಯೆಂದು ಯುವ ಪೀಳಿಗೆ ಅರಿಯುವಂತಾಗಲಿ. ಸಂಗ್ರಾಮ ಕಳೆದು 167 ವರ್ಷಗಳೇ ಸರಿದರೂ ಅವರ ಹೆಸರಿನಲ್ಲಿ ಚಿರಸ್ಮರಣೆಯ ಸ್ಮಾರಕವಾಗಲಿ, ಪುಸ್ತಕವಾಗಲಿ ಇರುವುದಿಲ್ಲ. ಸೇನಾಧಿಕಾರಿ ಗುಡ್ಡೆಮನೆ ಅಪ್ಪಯ ಗೌಡರನ್ನೂ ಈಗಿನ ಮಡಿಕೇರಿ ಕೋಟೆಯ ಹೆಬ್ಬಾಗಿಲ ಬಲಗಡೆ ಇರುವ ಬಾವಿಕಟ್ಟೆಯಲ್ಲಿ 31-10-1837 ರಲ್ಲಿ ತನ್ನ ಧರ್ಮಪತ್ನಿ

5 ನೇ ಪುಟಕ್ಕೆ

# ಮೈಸೂರಿನ ಗೌಡ ಸಂಘದಿಂದ ಅದ್ದೂರಿ ಕೈಲುಮುಹೂರ್ತ ಆಚರಣೆ.

**ವೇದಿಕೆಯಲ್ಲಿ ಹೊಸೂರು ರಮೇಶ್, ಕೆದಂಬಾಡಿ ಮುದ್ದಪ್ಪ, ಪೈಕೇರ ಅನಂತ್‌ರಾಂನವರು ಉಪಸ್ಥಿತರಿದ್ದರು**

ಕೊಡಗು ಗೌಡ ಸಂಘ, ಮೈಸೂರು ಇದರ ವತಿಯಿಂದ 14-9-2003 ರಂದು ನಗರದ ಕೊಡಗು ಗೌಡ ವಿದ್ಯಾರ್ಥಿನಿಲಯ ಜಯಲಕ್ಷ್ಮೀಪುರಂನಲ್ಲಿ ಕೈಲ್‌ಮುಹೂರ್ತ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸಲಾಯಿತು. ಅಂದು ಬೆಳಿಗ್ಗೆ 9-30 ಗಂಟೆಗೆ ಆಟೋಟ ಸ್ಪರ್ಧೆಗಳ ಮೂಲಕ ಕಾರ್ಯಕ್ರಮವು ಆರಂಭಗೊಂಡಿತು. ನಂತರ ಮನರಂಜನೆ ಕಾರ್ಯಕ್ರಮ ನಡೆಯಿತು. ಮಧ್ಯಾಹ್ನದ ಭೋಜನದ ನಂತರ ಸಭಾ ಕಾರ್ಯಕ್ರಮವು ಸಂಘದ ಅಧ್ಯಕ್ಷತೆ ಕೆದಂಬಾಡಿ ಮುದ್ದಪ್ಪನವರ ಘನ ಅಧ್ಯಕ್ಷತೆಯಲ್ಲಿ ನಡೆಸಲಾಯಿತು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರಾದ ಹೊಸೂರು ರಮೇಶ್ ಜೋಯಪ್ಪನವರು ಆಗಮಿಸಿದ್ದರೆ, ಇನ್ನೋರ್ವ ಮುಖ್ಯ ಅತಿಥಿಗಳಾಗಿ ಕೊಡಗು ಗೌಡ ಸಮಾಜ, ಮಡಿಕೇರಿ ಇದರ ಕಾರ್ಯದರ್ಶಿಯಾದ ಶ್ರೀ ಪೈಕೇರ ಅನಂತರಾಮ್‌ನವರು ಆಗಮಿಸಿದ್ದರು. ಅನಂತರಾಮ್ ರವರು ಈಗ ಅಧ್ಯಕ್ಷರಾಗಿದ್ದಾರೆ.

ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷ ಹೊಸೂರು ರಮೇಶ್ ಸಭೆಯನ್ನುದ್ದೇಶಿಸಿ ಮಾತನಾಡುತ್ತಾ ಕೊಡಗಿನ ಈ ಹಬ್ಬವನ್ನು ಮೈಸೂರಿನಲ್ಲಿರುವ ಕೊಡಗು ಗೌಡರೆಲ್ಲರೂ ಸೇರಿ ಒಂದಾಗಿ ತಮ್ಮ ಸಂಘದ ಮೂಲಕ ಆಚರಿಸುತ್ತಿರುವುದು ಔಚಿತ್ಯವಾಗಿದ್ದು, ನಮ್ಮ ಪರಂಪರೆಯನ್ನು ನೆನಪಿಸಿಕೊಂಡಂತಾಗಿದೆ ಎಂದರು. ಕೊಡಗು ಮತ್ತು ದ. ಕ. ಜಿಲ್ಲೆಯಲ್ಲಿ ಸುಮಾರು 5 ಲಕ್ಷ ಜನ ಗೌಡ ಜನಾಂಗಕ್ಕೆ ಸೇರಿದ್ದು, ಈಗಾಗಲೇ 3A ಗೆ ಸೇರ್ಪಡೆಯಾಗಿದ್ದೇವೆ. ಇವರನ್ನು 2A ವರ್ಗಕ್ಕೆ ಸೇರಿಸುವ ಮೂಲಕ ಹಿಂದುಳಿದ ವರ್ಗದವರ ಪಟ್ಟಿಯಲ್ಲಿ ಸೇರಿಸುವಂತೆ ಜನಾಂಗದವರೆಲ್ಲಾ ಕೂಡಿ ಹೋರಾಡಬೇಕು ಎಂದವರು ಕರೆ ನೀಡಿದರು.

ಮಳೆಗಾಲದಲ್ಲಿ ತಮ್ಮ ತಮ್ಮ ನಾಟಿ ಕೆಲಸ ಮುಗಿದ ನಂತರ ಕೈಲು ಮುಹೂರ್ತ ಹಬ್ಬವು ಎಲ್ಲಾ ಕಡೆ ಆರಂಭವಾಗುತ್ತದೆ. ನಾಟಿಯಂತಹ ಪ್ರಧಾನ ಕೃಷಿ ಚಟುವಟಿಕೆಗಳನ್ನು ಮುಗಿಸಿ ಮುಂದಿನ ಬೆಳೆ ಉತ್ತಮವಾಗಿ ಬರಲಿ ಎಂದು ರೈತಾಪಿ ಜನ ಈ ಹಬ್ಬವನ್ನು ಆಚರಿಸುತ್ತಿದ್ದು, ಇದರ ಮೂಲಕ ತಮ್ಮ ವ್ಯವಸಾಯಕ್ಕೆ ನೆರವಾದ ಸಲಕರಣೆಗಳ ಪೂಜೆ ನಡೆಸಲಾಗುತ್ತದೆ ಎಂದು ತಿಳಿಸಿದರು. ಕೊಡಗಿನಿಂದ ಹೊರಬಂದವರು ಎಲ್ಲೇ ಇರಲಿ, ಎಂತೆ ಇರಲಿ ಅವರು ಕೊಡಗಿನ ನಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಮರೆಯಬಾರದು. ನಮ್ಮ ಜನಾಂಗದವರು ಈಗೀಗ ಪಾಶ್ಚಾತ್ಯ ಹುಚ್ಚು ಸಂಸ್ಕೃತಿಗೆ ಮಾರು ಹೋಗಿದೆ. ತಮ್ಮ ಆಚಾರ ವಿಚಾರವನ್ನು ಬೆಳೆಸಲು ಮುಂದಾಗಬೇಕು. ಇಲ್ಲದಿದ್ದರೆ ನಮ್ಮ ಸಂಸ್ಕೃತಿ ನಶಿಸೋದು ಖಂಡಿತ ಎಂದು ಅವರು ತಿಳಿಸಿದರು. ನಾವುಗಳು ನಮ್ಮ ಸಮಾರಂಭಗಳಲ್ಲಿ ಮುಖ್ಯವಾಗಿ ಎಲ್ಲರು ಅರೆಗನ್ನಡ (ನಡುಗನ್ನಡ) ಭಾಷೆಯಲ್ಲಿ ವ್ಯವಹರಿಸಬೇಕೆಂದು, ಇದನ್ನು ಯಾರು ಸಹ ಹೇಳಿ ಕಲಿಸಬೇಕಾಗಿಲ್ಲವೆಂದು, ತನ್ನಷ್ಟಕ್ಕೆ ತಾವೆಲ್ಲರೂ ಮಾತನಾಡಬೇಕೆಂದು ಕಿವಿ ಮಾತು ಹೇಳಿದರು. ಶ್ರೀಯುತರು ನಡುಗನ್ನಡದಲ್ಲಿ ಮಾತನಾಡಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು.

ಕೊಡಗಿನಿಂದ ಆಗಮಿಸಿದ ಮತ್ತೋರ್ವ ಮುಖ್ಯ ಅತಿಥಿ, ಕೊಡಗು ಗೌಡ ಸಮಾಜ, ಮಡಿಕೇರಿ, ಇದರ ಕಾರ್ಯದರ್ಶಿ ಪೈಕೇರ ಅನಂತ್‌ರಾಮ್ ಮಾತನಾಡುತ್ತಾ ಭಾಷಣದಲ್ಲಿ ಯಾವಾಗಲೂ ಮೊದಲಿಗರಾಗಬೇಕು. ಇಲ್ಲದಿದ್ದರೆ ನಾವು ಹೇಳಬೇಕೆಂದಿರುವುದನ್ನೆಲ್ಲಾ ಮೊದಲ ಭಾಷಣಕಾರರು ಹೇಳಿಬಿಟ್ಟಿರುತ್ತಾರೆ. ಕೊನೆಯ ಭಾಷಣಕಾರರಿಗೆ ಏನೇನು ಹೇಳಲು ಉಳಿದಿರುವುದಿಲ್ಲ ಎಂದು ಸ್ವಲ್ಪ ಹಾಸ್ಯಭರಿತವಾಗಿಯೂ, ಚುಟುಕು ಉದಾಹರಣೆ ಪೋಣಿಸುತ್ತಾ ಸುಮಾರು ಅರ್ಧಗಂಟೆ ಮಿಕ್ಕಿ ಮಾತನಾಡಿದ್ದು ನಿಜಕ್ಕೂ ಮುದ ನೀಡಿತ್ತು. ಮನುಷ್ಯನಿಗೆ ತಿಳಿದುಕೊಳ್ಳಲು ಪ್ರತಿದಿನವೂ ಇರುವುದು. ನೋಡಿ, ಇಂದಿನ ಸಮಾರಂಭದಲ್ಲಿ ಮುಖ್ಯವಾಗಿ ವಿಘ್ನೇಶ್ವರನನ್ನು ಮಧ್ಯದಲ್ಲಿಟ್ಟು, ಕತ್ತಿಕೋವಿ ಬದಿಗಿಟ್ಟು, ಆಯುಧ ಪೂಜೆಯನ್ನು ಮಾಡಿರುವುದಂತೂ ಸತ್ಯ. ಆದರೆ ಗಣಪನಿಗೆ ತೆಂಗಿನ ಕಾಯಿಯನ್ನು ಒಡೆದಿಲ್ಲವೆಂದು ಭಾಷಣದಲ್ಲಿ ನೆನಪಿಸಿದಾಗ ಇಡೀ ಸಭೆಯು ಒಮ್ಮೆ ಸ್ತಬ್ಧವಾಗಿ, ಮರುಕ್ಷಣದಲ್ಲಿ ಗೊಳ್ಳೆಂದು ನಗೆಗಡಲಲ್ಲಿ ಮುಳುಗಿತು. ಆದ ಪ್ರಮಾದವನ್ನು ತಿಳಿಹೇಳಿದಕ್ಕೆ ಅತಿಥಿಗಳು ಕ್ಷಮೆಯನ್ನು ಕೇಳಲು ಸಹ ಮರೆಯಲಿಲ್ಲ. ಮೈಸೂರಿನಲ್ಲಿ ಉತ್ತಮ ಪ್ರತಿಭೆಗಳಿವೆ. ಇಲ್ಲಿನ ಪ್ರತಿಭೆಗಳನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಂಡು ವಿದ್ಯಾಸಂಘದ ಆವರಣದಲ್ಲಿ ಒಂದು ಉತ್ತಮವಾದ ಸಭಾ ಭವನ ನಿರ್ಮಾಣ ವಾಗಬೇಕು. ಮಾತನಾಡುತ್ತಾ ಹಿಂದಿನ ಕಾಲದಲ್ಲಿ ನಮ್ಮ ಹಿರಿಯರು ಹೇಳುತ್ತಿದ್ದಂತೆ ಕೈಲುಮುಹೂರ್ತ ಹಬ್ಬದಂದು "ಕಣಿ ಕೇಳಿ' ಬೇಟೆಗೆ ಹೋಗುತ್ತಿದ್ದರೆಂದು ಕೈಲುಪೋಳ್ದ್ ಹಬ್ಬದ ಮಹತ್ವವನ್ನು ವಿವರಿಸಿದರು.

ಮುಂದುವರಿದು ನಾವುಗಳು ಹೆಚ್ಚು ಹೆಚ್ಚು ಪುಸ್ತಕಗಳನ್ನು ಓದಬೇಕು. ಹೆಚ್ಚು ಹೆಚ್ಚು ಪುಸ್ತಕಗಳನ್ನು ಓದುವಾಗ ನಮ್ಮಲ್ಲಿ ಜ್ಞಾನ ಬೆಳೆಯುತ್ತದೆ. ಜ್ಞಾನ ಬೆಳೆದಾಗಲೆಲ್ಲಾ ಸತ್ಯ, ಧರ್ಮ, ಮೋಕ್ಷದ ಹಾದಿ ತಿಳಿಯುತ್ತದೆ. ದಾರಿ ಸುಗಮವಾಗುತ್ತದೆ. ಭಾರತದ ರಾಷ್ಟ್ರಪತಿಗಳು ತಿಳಿಸಿದಂತೆ 2020ರ ವೇಳೆಗೆ ಮುಂದುವರಿದ ರಾಷ್ಟ್ರಗಳ ಸಾಲಿನಲ್ಲಿ ನಾವಿರಬೇಕು. ಅದಕ್ಕಾಗಿ

ನಮ್ಮ ವಿದ್ಯಾಭ್ಯಾಸದ ವ್ಯವಸ್ಥೆಯೆ ಬದಲಾಗಬೇಕೆಂದು ಕರೆನೀಡಿದರು. ನಾವುಗಳು ನಮ್ಮ ಜನಾಂಗದವರ ಸರ್ವಾಂಗೀಣ ಅಭಿವೃದ್ಧಿಗೆ ಹೆಚ್ಚಿಗೆ ಒತ್ತು ನೀಡಿ, ಸ್ವಾರ್ಥ ಮನೋಭಾವದ ದುರಾಡಳಿತವನ್ನು ಖಂಡಿಸಿ ತ್ಯಾಗದ ಮನೋಸ್ಥೈರ್ಯದಿಂದ ಮುಂದುವರಿಯಬೇಕೆಂದು ವಿನಂತಿಸಿದರು.

ಸಂಘದ ಅಧ್ಯಕ್ಷರಾದ ಕೆದಂಬಾಡಿ ಮುದ್ದಪ್ಪನವರು ಮಾತನಾಡುತ್ತಾ ಮೈಸೂರಿನಲ್ಲಿ ನೆಲೆಸಿರುವ ಎಲ್ಲಾ ಗೌಡ ಬಂಧುಗಳು ಮೇಲು ಕೀಳೆಂಬ ಭಾವನೆಯ ಭಿನ್ನಾಭಿಪ್ರಾಯಗಳನ್ನು ಬಿಟ್ಟು ಒಂದಾಗಿ ಬಂದು ಈ ಸ್ಪರ್ಧಾತ್ಮಕ, ಕಾಲದಲ್ಲಿ ಜೊತೆಯಲ್ಲಿ ದುಡಿದು ನಮ್ಮ ಸಮಾಜದ ಅಭಿವೃದ್ಧಿಗೆ ನಾವುಗಳೆಲ್ಲರೂ ಸಂಘಟಿತರಾಗಿ ಹೋರಾಡಬೇಕೆಂದು ನೆರೆದಿದ್ದ ಗೌಡ ಬಂಧುಗಳಿಗೆ ಕರೆನೀಡಿದರು.

ಆಟೋಟ ಕಾರ್ಯಕ್ರಮವಲ್ಲದೆ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸರ್ವರಿಗೂ ಬಹುಮಾನ ನೀಡಲಾಯಿತು.

ಸಭೆಗೆ ಆಗಮಿಸಿದ ಸರ್ವರನ್ನೂ ಸಂಘದ ಕಾರ್ಯದರ್ಶಿ ಚೆರಿಯಮನೆ ರಾಮಚಂದ್ರನವರು ಸ್ವಾಗತಿಸಿದರು. ಪ್ರಾರ್ಥನೆಯನ್ನು ಕತ್ರಿಕೊಲ್ಲಿ ಪ್ರಿನ್ಸಿ ವಂಸತ್ ಕುಮಾರ್ ಮಾಡಿದರೆ ಸಹ ಕಾರ್ಯದರ್ಶಿ ಹುದೇರಿ ಸೋಮಣ್ಣನವರು ವಂದಿಸಿದರು. ದಿನದ ನಿರೂಪಣೆಯನ್ನು ಹೊಸೂರು ವಸಂತಕುಮಾರ್ ಮತ್ತು ಕಡ್ಯದ ರವಿಭೀಮಯ್ಯ ನೀಡಿದರು.

ಸಭೆಯಲ್ಲಿ ಸಂಘದ ಪದಾಧಿಕಾರಿಗಳಾದ ಕಾನಡ್ಕ ಪದ್ಮಾಜಿ, ನೆಯ್ಯಣೀರ ಕುಶಾಲಪ್ಪ, ನಡುಬೆಟ್ಟೀರ ಆನಂದ, ನಂಗಾರು ಸೋಮಣ್ಣ, ಕಾಳೇರಮ್ಮನ ನಾಣಯ್ಯ, ನಾಟೋಳನ ಶ್ರೀಧರ, ಹುದೇರಿ ಸೋಮಣ್ಣ, ಬಿದುರುಪಣೆ ದೇವಯ್ಯ, ಬಲ್ಯಮನೆ ಶಾಂತ ಭಾಸ್ಕರ, ಅಚ್ಚುಪಟ್ಟೀರ ಗಣೇಶ್ ಹಾಗೂ ಇನ್ನೂ ಹಲವರು ಉಪಸ್ಥಿತರಿದ್ದರು. ಈ ಸರ್ತಿಯ ಕಾರ್ಯ ಕ್ರಮದಲ್ಲಿ ಮೈಸೂರಿನ ವಿವಿಧ ಸಂಘ ಸಂಸ್ಥೆಗಳಾದ ಕೊಡಗು ಗೌಡ ಮಾಜಿ ಸೈನಿಕರ ಸಂಘ, ಗೌಡ ಮಹಿಳಾ ಒಕ್ಕೂಟ ಹಾಗೂ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಪದಾಧಿಕಾರಿಗಳು ಹಾಜರಿದ್ದರು. ಜನ ಸಂಘಟನೆ ದೃಷ್ಟಿಯಿಂದ ಮೈಸೂರು ಕೈಲ್‌ಪೋಳ್ದ್ ಕಾರ್ಯಕ್ರಮಕ್ಕೆ ಜನಸಾಗರ ಬಂದ ರೀತಿಯನ್ನೂ ಗಮನಿಸಿದಾಗ 1996 ರ ಕೈಲುಪೋಳ್ದ್ ಹಬ್ಬದ ನೆನಪು ಬರುತ್ತಿತ್ತೆಂದು, ನೆರೆದ ಜನರು ತಮ್ಮ ತಮ್ಮಲ್ಲಿಯೇ ಮಾತನಾಡಿ ಕೊಂಡಿರುವುದು ಹರ್ಷವಾಗುತ್ತಿತ್ತು, 1996 ರ ಕೈಲು ಪೋಳ್ದ್‌ನಲ್ಲಿ ಸುಮಾರು 800 ಜನರಾಗಮಿಸಿದ್ದರೆ ಈ ಸರ್ತಿ ಕನಿಷ್ಠ 500ರ ಹತ್ತಿರ ಹತ್ತಿರ ಸೇರಿದರೆಂದು ಸಂಗಾತಿಗೆ ತಿಳಿದು ಬಂದಿದೆ. ಸಮಯ ಕಾಲ ಎಲ್ಲಾ ಕೂಡಿ ಬಂದಾಗ ಸಂಘಟನೆ ಐಕ್ಯತೆ ಎಲ್ಲವು ತನ್ನಷ್ಟಕ್ಕೆ ತಾನೇ ಸೇರಿ ಬಲಿಷ್ಟ ಸಂಘಟನೆ ಯಾಗುವುದರಲ್ಲಿ ಎರಡು ಮಾತಿಲ್ಲವೆಂದು ಹಿರಿಯರು ಹೇಳುತ್ತಿದ್ದ ಮಾತುಗಳು ಸತ್ಯದ ಸಮೀಪ ಬರುತ್ತಿರುವುದು ಸಂತಸದ ಬೆಳವಣಿಗೆ.

ಜೈ ಗೌಡ ಬಾಂಧವರೆ,

ವರದಿ - ನೀಶಾ ಪಟ್ಟಡ,

# ಕಾವೇರಿ ನಾಡು ವಿದ್ಯಾಸಂಸ್ಥೆ, ಬೆಂಗಳೂರು ಇದರ ವತಿಯಿಂದ ಕೊಡಗು ವಾಲಗ ಪೊನಿಧ್ವನಿ ಭಾಗ -6 ಬಿಡುಗಡೆ



ಕಾವೇರಿನಾಡು ವಿದ್ಯಾಸಂಸ್ಥೆ ಅರ್ಪಿಸಿದ ಕೊಡಗು ವಾಲಗ, ಪೊನಿಧ್ವನಿ ಭಾಗ-6 ಡ್ಯಾನ್ಸ್, ರಿಮೀಕ್ಸ್ ವಿತ್ ಡಿಜಿಟಲ್ ಡ್ರಮ್ಸ್ ಧ್ವನಿ ಸುರುಳಿಯು ಅಮ್ಮಾಜೀರ ಎಸ್. ಪೊನ್ನಪ್ಪ ನೀಲಾನವರ ಸಾಹಿತ್ಯ ರಚನೆಯಲ್ಲಿ ದಿನಾಂಕ 25-9-2003 ರಂದು ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ಅಧ್ಯಕ್ಷರಾದ ತುಂತಜೆ ಗಣೇಶ್‌ನವರು ಮಡಿಕೇರಿ ಜೂನಿಯರ್ ಕಾಲೇಜು ರಸ್ತೆಯಲ್ಲಿರುವ ಹೊಟೇಲ್ ಅಮೃತ್ ಆರ್ಕೆಡ್‌ನಲ್ಲಿ ನಡೆದ ಸರಳ ಸಮಾರಂಭದಲ್ಲಿ ಬಿಡುಗಡೆಗೊಳಿಸಿದರು.

ಅಧ್ಯಕ್ಷತೆಯನ್ನು ಗೌಡ ಅಕಾಡೆಮಿ ಅಧ್ಯಕ್ಷರಾದ ತುಂತಜೆ ಗಣೇಶ್‌ನವರು ವಹಿಸಿದ್ದರು. ಸಭೆಯಲ್ಲಿ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರನವರು, ಕಾವೇರಿನಾಡ್ ವಿದ್ಯಾಸಂಸ್ಥೆಯ ನಿರ್ಮಾಪಕ ಅಮ್ಮಾಜೀರ ಪೊನ್ನಪ್ಪನವರು, ಗೌಡ ಅಕಾಡೆಮಿಯ ಖಜಾಂಚಿ ಕುಂಜಿಲನ ಸತೀಶ್‌ನವರು, ಮತ್ತು ಮಧು ಮೋಟಾರ್ಸ್‌ನ ಮಾಲೀಕ ಪೊನ್ನಚನ ಮಧು ಹಾಗೂ ಹಲವು ಹಿತೈಷಿ ಅಭಿಮಾನಿಗಳು ಹಾಜರಿದ್ದರು. ಅಮ್ಮಾಜೀರ ಪೊನ್ನಪ್ಪನವರು ಕೊಡಗು ವಾಲಗದ ಬಗ್ಗೆ ಮಾತನಾಡುತ್ತಾ ಈ ಧ್ವನಿ ಸುರುಳಿಯಲ್ಲಿ ಈಗಿನ ನವ ಯುವ ಜನತೆಗೆ ಅವರ ಅಭಿರುಚಿಗೆ ತಕ್ಕಂತೆ ಡ್ಯಾನ್ಸ್ ರೀಮಿಕ್ಸ್ ವಿತ್ ಡಿಜಿಟಲ್ ಡ್ರಮ್ಸ್‌ನಲ್ಲಿ ರಚಿಸಲಾಗಿದ್ದು ಹಳೇಬೇರು ಹೊಸಚಿಗುರುವಿನಂತೆ ಜನರಲ್ಲಿ ಇದು ಸ್ಪಂದಿಸಿ ಉತ್ತಮ ಕೊಡುಗೆಯಾಗಿ ನಾಡಿಗೆ ಕೀರ್ತಿ ತರಲೆಂಬುದಾಗಿ ಹಾರೈಸಿದರು.

ಕುಮಾರಿ ಸುಚೀತಾ ಗಣೇಶ್‌ನವರು ಪ್ರಾರ್ಥಿಸಿದರೆ ಪಾಣತ್ತಲೆ ನಾಗೇಶ್‌ನವರು ನೆರೆದವರಿಗೆ ಅಭಿನಂದನೆ ಸಲ್ಲಿಸಿದರು.

-ಸಂಗಾತಿ.

# ಪರಿಚಯ



*ಕರ್ಮಣ್ಯೇ ವಾಧಿಕಾರಸ್ತೆ*
*ಮಾಫಲೇಷು ಕದಾಚನ*
*ಮಾ ಕರ್ಮಫಲ ಹೇತುರ್ಭೂರ್*
*ಮಾರ್ತೆ,ಸಂಗೋಸ್ತ್ವಕರ್ಮಣಿ*

**ಕೆ.ಆರ್. ರೋಹಿಣಿ**

ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಅರ್ಜುನನಿಗೆ ಈ ರೀತಿ ಉಪದೇಶ ಮಾಡುತ್ತಾನೆ. ಕರ್ಮ ಮಾಡುವುದಕ್ಕೆ ಮಾತ್ರ ನಮಗೆ ಅಧಿಕಾರ. ಫಲಾಪೇಕ್ಷೆ ಯಿಲ್ಲದೆ ಮಾಡಿದ ಕರ್ಮವೆ ನಿಜವಾದ ಕರ್ಮ. ಆತ್ಮವಂಚನೆಯಿಲ್ಲದೆ ನಿಸ್ವಾ ರ್ಥ ಭಾವನೆಯಿಂದ, ಶ್ರದ್ಧೆಯಿಂದ ಮಾಡಿದ ಕೆಲಸಕ್ಕೆ ಉತ್ತಮ ಪ್ರತಿಫಲ ದೊರೆತೇ ದೊರೆಯುತ್ತದೆ ಎಂಬುದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಅಂತಹವರಲ್ಲಿ ಸೋಮವಾರಪೇಟೆ ತಾಲೂಕು ಕೂಡಿಗೆ,ಸದ್ಗುರು ಅಪ್ಪಯ್ಯಸ್ವಾಮಿ ಪ್ರೌಢಶಾಲೆಯ ಶಿಕ್ಷಕಿ ಶ್ರೀಮತಿ ರೋಹಿಣಿ ಕುಶಾಲಪ್ಪ ಒಬ್ಬರಾಗಿದ್ದಾರೆ. ಇತ್ತೀಚೆಗೆ ಅವರಿಗೆ 'ಜನಮೆಚ್ಚಿದ ಶಿಕ್ಷಕಿ' ಪ್ರಶಸ್ತಿ ದೊರೆತಿರುವುದು ನಮಗೆಲ್ಲರಿಗೆ ಅತೀವ ಸಂತೋಷವನ್ನುಂಟು ಮಾಡಿದೆ.

ಶ್ರೀಮತಿ ಕೆ. ಆರ್. ರೋಹಿಣಿಯವರು ಭಾಗಮಂಡಲ ನಾಡು ಕುಂದಚೇರಿ ಗ್ರಾಮದ ಕೆದಂಬಾಡಿ ಕೀರ್ತಿಶೇಷ ಪಟೇಲ್ ದಿ. ರಾಮಯ್ಯನವರ ತೃತೀಯ ಪುತ್ರಿ. ತಾಯಿ ಲಕ್ಷ್ಮಮ್ಮನವರಿಗೆ ಒಬ್ಬ ಸಹೋದರ ಮತ್ತು ಮೂವರು ಸಹೋದರಿಯರು. ಶ್ರೀಮತಿ ರೋಹಿಣಿಯವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸ ವನ್ನು ಚೆಟ್ಟಿಮಾನಿಯಲ್ಲೂ, ಪ್ರೌಢವಿದ್ಯಾಬ್ಯಾಸವನ್ನು ಭಾಗಮಂಡಲ ಪ್ರೌಢಶಾಲೆಯಲ್ಲಿಯೂ ಕಾಲೇಜು ವಿದ್ಯಾಭ್ಯಾಸ ವನ್ನು ಭಾಗಮಂಡಲ ಪ್ರೌಢಶಾಲೆ ಯಲ್ಲಿಯೂ ಕಾಲೇಜು ವಿದ್ಯಾಭ್ಯಾಸವನ್ನು ಗೋಣಿಕೊಪ್ಪಲಿನಲ್ಲಿಯೂ, ಬಿ.ಇಡಿ., ತರಬೇತಿಯನ್ನು ವಿರಾಜಪೇಟೆಯ ಸರ್ವೋಧಯ ಶಿಕ್ಷಣ ತರಬೇತಿ ಕೇಂದ್ರ ದಲ್ಲಿಯೂ ಮುಗಿಸಿ ತಮ್ಮ ಶಿಕ್ಷಕ ವೃತ್ತಿಯನ್ನು ಭಾಗಮಂಡಲ ಪ್ರೌಢಶಾಲೆಯಲ್ಲಿ ಪ್ರಾರಂಭಿಸಿದರು. ಮುಂದೆ ಮಡಿಕೇರಿಯ ಸರಸ್ವತಿ ಶಿಕ್ಷಕ ತರಬೇತಿ ಸಂಸ್ಥೆಯಲ್ಲಿ ಶಿಕ್ಷಕಿಯಾಗಿ ಸೇವೆ ಸಲ್ಲಿಸಿರುತ್ತಾರೆ. 1980 ಜೂನ್ 17 ರಂದು ಹೆರವನಾಡು ಗ್ರಾಮದ ಬೆಪ್ಪುರನ ಸೀತಮ್ಮ ಪಳಂಗಪ್ಪನವರ ಪ್ರಥಮ ಪುತ್ರ ಕುಶಾಲಪ್ಪನವರೊಡನೆ ವೈವಾಹಿತ ಜೀವನಕ್ಕೆ ಕಾಲಿರಿಸಿದರು.

1986 ರಿಂದ ಕೂಡಿಗೆಯ ಶ್ರೀ ಸದ್ಗುರು ಅಪ್ಪಯ್ಯಸ್ವಾಮಿ ಪ್ರೌಢಶಾಲೆಯಲ್ಲಿ ಕನ್ನಡ ಭಾಷೆ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಉತ್ತಮ ಶಿಕ್ಷಕಿ ಎಂಬುದಕ್ಕೆ ಇವರು ಬೋಧಿಸುವ ಕನ್ನಡ ವಿಷಯದಲ್ಲಿ ಈವರೆಗೆ ನಡೆದ ಎಲ್ಲಾ ಎಸ್.ಎಸ್.ಎಲ್.ಸಿ. ಅಂತಿಮ ಪರೀಕ್ಷೆಗಳಲ್ಲಿ ಶೇಕಡ ನೂರರಷ್ಟು ಫಲಿತಾಂಶ ದೊರೆತಿರುವುದೇ ಅಲ್ಲದೇ ವಿದ್ಯಾರ್ಥಿಗಳ ಹಾಗೂ ಸಾರ್ವಜನಿಕರ ಮೇಲಾಧಿಕಾರಿಗಳ ಪ್ರೀತ್ಯಾಧರಗಳಿಗೆ ಭಾಜನರಾಗಿರುವುದೇ ಸಾಕ್ಷಿ. ಇವರು ಶಾಲೆಯ ಎಲ್ಲಾ ಪಾಠೇತರ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ತೊಡಗಿಸಿಕೊಳ್ಳುವುದಲ್ಲದೆ, ಸಹೋದ್ಯೋಗಿಗಳು ವಿದ್ಯಾರ್ಥಿಗಳು ಶಾಲಾ ಮುಖ್ಯಸ್ಥರು, ಶಾಲಾಭಿವೃದ್ಧಿ ಮಂಡಳಿ ಹಾಗೂ ಮೇಲಿನ ಅಧಿಕಾರಿಗಳೊಡನೆ ಉತ್ತಮ ಸಂಬಂಧ ಮತ್ತು ಸಹಕಾರ ಹಸ್ತ ನೀಡುತ್ತಿರುವುದು ಇವರ ಯಶಸ್ಸಿನ ರಹಸ್ಯವೆನ್ನಬಹುದಾಗಿದೆ. ಇವರಿಗೆ ದೊರೆತ ಪ್ರಶಸ್ತಿ ಇವರ ಕರ್ತವ್ಯ ನಿಷ್ಠೆ, ಶ್ರದ್ಧೆ ಪ್ರಾಮಾಣಿಕತೆ, ಸಮಯ ಪಾಲನೆ ಇವುಗಳಿಗೆ ದೊರೆತ ಕೊಡುಗೆಯಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಇವರು ಉತ್ತಮ ಹಾಡುಗಾರರಲ್ಲದೆ ನೃತ್ಯದಲ್ಲಿಯೂ ಉತ್ತಮ ಆಸಕ್ತಿ ಹೊಂದಿರುತ್ತಾರೆ.

ಇವರ ಪತಿ ಅರಣ್ಯ ಇಲಾಖೆಯಲ್ಲಿದ್ದು, ಪ್ರಥಮ ಪುತ್ರ ಮಂಗಳೂರಿನಲ್ಲಿ ದ್ವಿತೀಯ ಎಲ್. ಎಲ್. ಬಿ.ಯಲ್ಲಿ ವ್ಯಾಸಂಗ ಮಾಡುತ್ತಿದ್ದು ದ್ವಿತೀಯ ಪುತ್ರ ಕುಶಾಲನಗರ ತಾಂತ್ರಿಕ ಶಿಕ್ಷಣ ಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ. ಇವರಿಗೆ ನಮ್ಮ ಕುಲದೇವರಾದ ಶ್ರೀ ವೆಂಕಟರಮಣಸ್ವಾಮಿಯು ಆಯು ರಾರೋಗ್ಯ ಸಂಪತ್ತು ಹಾಗೂ ಉಜ್ವಲ ಭವಿಷ್ಯ ನೀಡಲೆಂದು ಹಾರೈಸೋಣ.

*ಸಾದರ ಪಡಿಸಿದವರು*

ಎಂ. ಎಂ. ಉಲ್ಲಾಸ್, ನಿವೃತ್ತ ಶಿಕ್ಷಕ, ಕುಶಾಲನಗರ.

---

**2 ನೇ ಪುಟದಿಂದ**

ಕಾವೇರಮ್ಮ, ಸಹೋದರ ಪೊನ್ನಪ್ಪನ ಸಮ್ಮುಖದಲ್ಲಿ ನಾಡ ಪಟೇಲರ ಸಮ್ಮುಖದಲ್ಲಿ ಕೊಡಗಿನ ಜನತೆಯ ಸಮ್ಮುಖದಲ್ಲಿ ನೋಡುನೋಡುತ್ತಿರುವಂತೆಯೇ ಗಲ್ಲು ಶಿಕ್ಷೆಗೆ ಗುರಿಪಡಿಸಿ ಹುತಾತ್ಮರಾದರು. ನಾಡಿಗಾಗಿ ಹೋರಾಡಿದರು. ತನ್ನ ಜಾತಿಯ ಜನರೆಲ್ಲಾ ಬ್ರಿಟಿಷರ|ಕೃಪೆಗೆ ಪಾತ್ರರಾದರು. ಇದನ್ನೆಲ್ಲಾ ಕೊಡಗಿನ ಚರಿತ್ರೆಯು ಮುಂದಿನ ಪೀಳಿಗೆಗೆ ರವಾನಿಸಿಲ್ಲ. ಅವರಬಗ್ಗೆ ಪುಸ್ತಕವಾಗಲಿ ವಿಮರ್ಶೆಯಾಗಲಿ ಸ್ಮಾರಕವಾಗಲಿ, ವೀರಗಲ್ಲುಗಳಾಗಲಿ ವೀರವನಗಳಾಗಲಿ ಎಲ್ಲಿಯೂ ಸಿಗುತ್ತಿಲ್ಲ. ಇದು ನಾವು ಹಿರಿಯರಿಗೆ ನೀಡುವ ಕಾಣಿಕೆಯೇ?

ತಮ್ಮ ತಂದೆ ತಾಯಿಯವರನ್ನೊ, ಪ್ರೀತಿಪಾತ್ರರಾದವರನ್ನೂ, ಕಾಲಕಂಡವರನ್ನು ಪತ್ರಿಕೆಗಳಲ್ಲಿ ಜಾಹೀರಾತು ನೀಡಿ ನೆನಪಿಸಿದರೆ ಇಂತಹ ಸಂಗ್ರಾಮವನ್ನೆ ಕಡೆಗಣಿಸಿ ಹಿರಿಯರ ಶೌರ್ಯವನ್ನು ಮರೆತು ಕುಳಿತ ಜನರನ್ನು ಸರ್ಕಾರವನ್ನು ಏನನ್ನ ಬೇಕೋ ತಿಳಿಯದಾಗಿದೆ. ಈ ನಿಟ್ಟಿನಲ್ಲಿ ಸಂಸ್ಕರಣ ಸಮಿತಿ, ಗೌಡ ಅಕಾಡೆಮಿ, ಗೌಡ ವಿದ್ಯಾಸಂಘ ಹಲವು ಸಂಘ ಸಂಸ್ಥೆಗಳ ಪ್ರಯತ್ನ ಏನೇನೂ ಸಾಲದು. ಆಡಳಿತ ವರ್ಗದೊಂದಿಗೆ ಜನಬಳಗ ಸೇರಿ 31-10-2003 ರಂದು ಗಲ್ಲಿಗೇರಿದ ಸ್ಥಳದಲ್ಲಿ ಕಾರ್ಯಕ್ರಮ ಸಾದರ ಪಡಿಸಿದರೆ ಸಂಗಾತಿಗದೆ ಸಮಾಧಾನ.

# ಪಿರಿಯಾ ಪಟ್ಟಣ ಗೌಡ ಸಮಾಜ

***ದಿನಾಂಕ 21-9-2003 ರಲ್ಲಿ ವಾರ್ಷಿಕ ಮಹಾ ಸಭೆ ನಡೆಯಿತು.***

ಇತ್ತೀಚೆಗೆ ಹಲವರು ಜಿಲ್ಲೆಯಿಂದ ಹೊರಬಂದು ಪಕ್ಕದ ಜಿಲ್ಲೆಗಳಲ್ಲಿ ನೆಲೆನಿಂತು ತಮ್ಮ ಜೀವನವನ್ನು ಆರಂಭಿಸಿರುವುದು ನಾವಿಂದು ಕಾಣಬಹುದಾಗಿದೆ. ಹಾಗೆಯೇ ನೆಲೆನಿಂತು ಅಲ್ಲಿಯೇ ತಮ್ಮ ಸರ್ವಸ್ವವನ್ನು ಕಾಣ ಬಯಸುವುದು ಸಹಜ. ಅಂತೆಯೇ ಪಕ್ಕದ ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ಗೌಡ ಬಾಂಧವರೆಲ್ಲಾ ಸೇರಿ ಈಗ್ಗೆ 10-12 ವರ್ಷಗಳ ಹಿಂದೆ ಚಿಕ್ಕಗೌಡ ಸಂಸ್ಥೆಯನ್ನು ಹುಟ್ಟು ಹಾಕಿದ್ದು ಮೊನ್ನೆ ಮೊನ್ನೆಯಾಗಿ ತನ್ನ 13 ನೇ ವಾರ್ಷಿಕ ಮಹಾಸಭೆಯನ್ನು ಪಿರಿಯಾಪಟ್ಟಣದಲ್ಲಿರುವ ಗೌಡ ಸಮಾಜದ ಕಟ್ಟಡದಲ್ಲಿ ನಡೆಯಿಸಿತು.

ಅಂದು ಬೆಳಿಗ್ಗೆ 11 ಗಂಟೆಗೆ ಸರಿಯಾಗಿ ಕಾರ್ಯಕ್ರಮ ದಂತೆ ಕುಮಾರಿ ಕೊರಂಬಡ್ಕ ದಿವ್ಯ ಬಿದ್ದಪ್ಪನವರ "ವಿಘ್ನೇಶ್ವರನ ಸ್ತುತಿಯ" ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಸಭೆಯ ಅಧ್ಯಕ್ಷತೆಯನ್ನು ತೋಟಂಬೈಲು ಪ್ರಭಾಕರನವರು ವಹಿಸಿದ್ದರು. ಕಾರ್ಯದರ್ಶಿ ಶ್ರೀ ಹುದೇರಿ ಸೋಮಣ್ಣನವರು ನೆರೆದ ಸರ್ವ ರನ್ನೂ ಸ್ವಾಗತಿಸಿದರು. ವೇದಿಕೆಯಲ್ಲಿ ಆಡಳಿತ ಮಂಡಳಿ ಸದಸ್ಯರು ಆಸೀನರಾಗಿದ್ದರು.

ಮೊದಲಿಗೆ ಮೃತಪಟ್ಟ ಸದಸ್ಯರಿಗೆ 2 ನಿಮಿಷಗಳ ಕಾಲ ಮೌನ ಸಂತಾಪ ಸೂಚಿಸಲಾಯಿತು. ವಾರ್ಷಿಕ ವರದಿಯನ್ನು ಸಹ ಕಾರ್ಯದರ್ಶಿ ಮೇಡ್ತನ ಶಿವಾಜಿಯವರು ವಾಚಿಸಿ ಅನು ಮೋದನೆ ಪಡೆದರು. 2002-03 ರ ಸಾಲಿನ ಆಡಳಿತ ಮಂಡಳಿಯ ವರದಿಯನ್ನು ಕಾರ್ಯದರ್ಶಿ ಹುದೇರಿ ಸೋಮಣ್ಣನವರು ಓದಿ ಸಭೆಯ ಒಪ್ಪಿಗೆ ಪಡೆಯಲಾಯಿತು.

ಮಹಾ ಸಭೆಯಲ್ಲಿ ಹಲವಾರು ವಿಷಯಗಳ ಬಗ್ಗೆ ಚರ್ಚಿಸ ಲಾಯಿತು. ಕುಯ್ಯಮುಡಿ ಅಶ್ವಿನಿಕುಮಾರ್, ಕುಯ್ಯುಮುಡಿ ಅಶ್ವತ್, ಇನ್ನಿತರರು ಮಾತನಾಡಿದರು. ವಿದ್ಯಾವೇತನ ನಿಧಿ ಯನ್ನು ಸ್ಥಾಪಿಸುವ ಬಗ್ಗೆ ಹುದೇರಿ ಸೋಮಣ್ಣನವರು ಮಂಡಿಸಿದ್ದು, ನೆರೆದ ಸಭಿಕರಿಂದ 2120/- ಅನ್ನು ಸಂಗ್ರಹಿಸಿದ್ದು ಅಲ್ಲದೆ ಹಿಂದಿನ ಇತರೆ ಬಾಕಿಯನ್ನು ಸೇರಿಸಿ ಸುಮಾರು 4500/- ರೂಪಾಯಿಯಷ್ಟು ಒಟ್ಟು ಸೇರಿಸಿ "ವಿದ್ಯಾರ್ಥಿ ವೇತನ ನಿಧಿ"ಯನ್ನಾಗಿ ಪರಿವರ್ತಿಸಲಾಯಿತು. ವೇತನ ಪಡೆದ ವಿದ್ಯಾರ್ಥಿಯು ಯಾವುದೇ ಕಾರಣಕ್ಕೂ ವಿದ್ಯೆಯನ್ನು ಮೊಟಕು ಗೊಳಿಸದೆ ಮುಂದುವರಿಸಿದಲ್ಲಿ ಮಾತ್ರ ಈ ವೇತನ ನಿಧಿಯನ್ನು ನೀಡುವಂತೆ ತೀರ್ಮಾನಿಸಲಾಯಿತು.

ತದನಂತರ ಚರ್ಚಿಸುತ್ತಾ, ಪಿರಿಯಾಪಟ್ಟಣದಲ್ಲಿ ಇರುವ ಯಾವುದಾದರು ಮುಖ್ಯ ರಸ್ತೆಗೆ ಇತ್ತೀಚೆಗೆ ರಾಷ್ಟ್ರದ ರಕ್ಷಣಾ ಕಾರ್ಯದಲ್ಲಿ ಮಗ್ನರಾಗಿದ್ದ ಸಂದರ್ಭ ವೀರಮರಣ ಹೊಂದಿದ ಕುಯ್ಯಮುಡಿ ಬೆಳ್ಳಿಯಪ್ಪ (ಬೆಲ್ಲು) ಯವರ ಚಿರಸ್ಮರಣೆಗಾಗಿ ಅವರ ಹೆಸರನ್ನು ಇಡುವಂತೆ ಸಭೆಯು ಒತ್ತಾಯಿಸಿತು. ಈ ನಿಟ್ಟಿನಲ್ಲಿ ಕಾರ್ಯಕಾರಿ ಮಂಡಳಿಯು ಸಂಬಂಧಪಟ್ಟವರೊಂದಿಗೆ ವ್ಯವಹರಿಸುವಂತೆ ತಿಳಿಸಿತು. ಗೌಡ ಸಮಾಜದ ಸಾಂಸ್ಕೃತಿಕ ಕಾರ್ಯಕ್ರಮದ ಮುಖ್ಯ ಸಂಚಾಲಕಿಯಾಗಿ ಶ್ರೀಮತಿ ಕೆದಂಬಾಡಿ ಯಶೋದಮ್ಮ ಮೊಣಪ್ಪನವರನ್ನು ಆರಿಸಲಾಯಿತು. ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರನವರು ಉಪಸ್ಥಿತರಿದ್ದು ಸಭೆಯಲ್ಲಿ ಹಲವು ಸಲಹೆ ಸೂಚನೆ ನೀಡಿದರು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಮಾತನಾಡುತ್ತಾ ತಾಲ್ಲೂಕಿನ ನಮ್ಮ ಎಲ್ಲಾ ಕುಲಬಾಂಧವರು ಸಾಕಷ್ಟು ಸಹಕರಿಸಿದ್ದೀರಿ. ತಾವುಗಳು ಇನ್ನೊಮ್ಮೆ ತಮ್ಮ ತನು, ಮನ, ಧನದೊಂದಿಗೆ ಸಹಕರಿಸಿದ್ದಲ್ಲಿ ಮುಂದಿನ ಸಾಲಿನ ಇದೇ ಸಮಯಕ್ಕೆ ಖಂಡಿತವಾಗಿಯೂ ಈಗಿರುವ ಗೌಡ ಸಮಾಜ ಕಟ್ಟಡ ಆವರಣದಲ್ಲಿ ಗೌಡ ಸಮುಧಾಯಭವನವನ್ನು ಕಟ್ಟುವ ಕನಸ್ಸನ್ನು ಪೂರೈಸಬೇಕು ಎಂದು ತಮ್ಮ ಅಂತರಾಳದ ಇಂಗಿತವನ್ನು ಸಭೆಗೆ ಬಿಡಿಸಿಟ್ಟರು. ಅದಕ್ಕೆ ಪೂರಕವಾದ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಲು ನಾವುಗಳು ಕೆಲವು ಕಾರ್ಯಕ್ರಮ ಹಮ್ಮಿಕೊಂಡು, ಹಲವು ಕಡೆ ಪ್ರವಾಸ ಕೈಗೊಂಡು ದಾನಿಗಳಿಂದ ಹಣ ಸಂಗ್ರಹಿಸಬೇಕಾಗಿದೆಯೆಂದು ಆದ್ದರಿಂದ ಈ ನಿಟ್ಟಿನಲ್ಲಿ ಸರ್ವರೂ ತಮ್ಮ ಕರ್ತವ್ಯವನ್ನು ಅರಿತು ಸಹಕರಿಸಬೇಕೆಂದು ಇನ್ನೊಮ್ಮೆ ಕೋರಲಾಯಿತು.

ಪಿರಿಯಾಪಟ್ಟಣ ಗೌಡ ಸಮಾಜವು ಸುಮಾರು ಒಂದು ಎಕ್ರೆ ಜಮೀನಿನಲ್ಲಿ ಮೇಳೈಸಿ, ಚಿಕ್ಕದಾಗಿ ಸುಂದರವಾಗಿ ಮೈ ತಳೆದು ನಿಂತಿರುವುದು ಗೌಡ ಜನಾಂಗಕ್ಕೊಂದು ಹೆಮ್ಮೆಯ ಕಿರೀಟ ಪ್ರಾಯವಾಗಿದೆ. ಸಮುಧಾಯ ಭವನದ ನಿಲುವು ಸಾಕಾರ ಗೊಂಡರೆ ಪಿರಿಯಾಪಟ್ಟಣ ತಾಲೂಕಿನ ಎಲ್ಲಾ ವರ್ಗದ ಜನರಿಗೆ ಅನುಕೂಲವಾಗಲಿದ್ದು, ಉತ್ತಮ ಸ್ಪಂದನ ನಿರೀಕ್ಷಿಸುವುದಲ್ಲದೆ ಲಾಭದಾಯಕವೂ ಕೂಡ ಹೌದಾಗಿದೆ. ಈ ನಿಟ್ಟಿನಲ್ಲಿ ಪ್ರತಿಯೊಬ್ಬ ಗೌಡ ಬಂಧು ಭಗಿನಿಯಿಂದ ಸಹಾಯ ಇರಲೆಂದು ಈ ಸಂದರ್ಭದಲ್ಲಿ ಶುಭ ಹಾರೈಸೋಣ.

-ಸಂಗಾತಿ.

ದೃಢ ಮನಸ್ಸಿನಿಂದ ಅಚ್ಚಳಿಯದ ಶಕ್ತಿ ಬೆಳೆಯುತ್ತದೆ

# ಮಹಿಳಾ ಸ್ವಸಹಾಯ ಸಂಘ

ಮಹಿಳೆಗೆ ಸ್ಫೂರ್ತಿದಾಯಕವಾಗಿ ಆದರ್ಶವಾಗಿ ಪ್ರಗತಿಯಾಗಿರುವ ಅಂಶವೆಂದರೆ ಇತ್ತೀಚೆಗೆಯಷ್ಟೆ ಜನಪ್ರಿಯವಾಗಿ ಮಹಿಳೆಯು ಸ್ವರಕ್ಷಣಾ ಎಲ್ಲಾ ರೀತಿಯಲ್ಲಿ ಮಹಿಳೆಗೆ ಬೆಂಬಲವಾಗಿ ಸಹಕರಿಸುವ ಮತ್ತು ಪ್ರೋತ್ಸಾಹಿಸುವ ಸಮುದಾಯಕ ಕೂಟಗಳೇ ಮಹಿಳಾ ಸ್ವಸಹಾಯ ಸಂಘಗಳು. ಈ ಸಂಘಗಳಿಂದ ಗ್ರಾಮೀಣ ಮಹಿಳೆಯರಿಗೆ ಮತ್ತು ಪಟ್ಟಣದ ಮಹಿಳೆಯರಿಗೆ ಆಗುವ ಪ್ರಯೋಜನಗಳು ಮತ್ತು ಲಾಭ ಹಾಗೂ ಉದ್ದೇಶಗಳು ಮತ್ತು ಕುಟುಂಬದಲ್ಲಿ ಕೆಲವೊಂದು ಘಟನೆಗಳ ನಿವಾರಣೆಗೆ ಆಗುವ ಫಲಕಾರಿಯಾದಂತಹ ಸಂಬಂಧದ ಪರಿಹಾರಗಳು, ಸಂಸಾರದಲ್ಲಿ ಕಷ್ಟ ನೋವುಗಳಿಗೆ ಮತ್ತು ಮಕ್ಕಳ ವಿದ್ಯಾಭ್ಯಾಸಕ್ಕೆ ಮತ್ತು ಚಿಕ್ಕಪುಟ್ಟ ವ್ಯಾಪಾರಗಳಿಗೆ ಹೇಗೆ ಸ್ಪಂದಿಸುವವು ಎಂಬುವುದನ್ನು ಹೀಗೆ ರೂಪಿಸಲಾಗಿದೆ.

ಹೀಗೆ ಗ್ರಾಮೀಣಗಳಲ್ಲಿ ಒಂದೆಡೆ ಮಹಿಳೆಯರು ಕೂಲಿ ಮಾಡಿ ತನ್ನ ದಿನ ನಿತ್ಯದ ದುಡಿಮೆಯಲ್ಲಿ ತನ್ನ ಸಂಸಾರವನ್ನು ಹೇಗೆ ನಿಭಾಯಿಸಬಹುದು ಎಂಬುವುದಕ್ಕೆ ಉದಾ: ಕೂಲಿ ಮಹಿಳೆಯು ಕುಡುಕ ಗಂಡ ಮತ್ತು ಮೂರು ಜನ ಮಕ್ಕಳನ್ನು ಹೊಂದಿಕೊಂಡು ಹೇಗೆ ಸಂಸಾರಿಕವಾಗಿ ಜೀವನದ ಹಾದಿಯನ್ನು ಮುಂದುವರಿಯಲು ಸಾಧ್ಯ. ಹೆಂಡತಿ ಸಂಜೆ ತನಕ ದುಡಿದು ಬಂದ ಕೂಲಿ ಹಣವನ್ನು ಗಂಡನ ಕುಡಿತಕ್ಕೆ ಹಣ ಕೊಡುವಳು. ಮಕ್ಕಳು ಹಸಿವಿನಿಂದ ಇದ್ದರು ಕೂಡ ಗಂಡ ಕೊಡುವ ಕ್ಷಣಿಕ ಸುಖಕ್ಕೋಸ್ಕರವಾಗಿ ಹಣವೆಲ್ಲವನ್ನು ಗಂಡನಿಗೆ ಕೊಟ್ಟು ಮಕ್ಕಳಿಗೆ ಅಲ್ಪ ಸ್ವಲ್ಪ ಇದ್ದ ಅಕ್ಕಿಯಿಂದ ಗಂಜಿ ಮಾಡಿ ಉಣಬಡಿಸುವಳು. ಮಕ್ಕಳ ಭವಿಷ್ಯವನ್ನು ರೂಪಿಸಲು ಅವಳಿಗೆ ಅಸಾಧ್ಯವಾದಂತ ವಾತಾವರಣ ಅವಳಲ್ಲಿ ಮನೆ ಮಾಡಿರುತ್ತದೆ. ಹೀಗಿರುವಾಗ ಸಮಾಜ ಸೇವಕಿಯರು ಕೆಲವೊಂದು ವಿಷಯವನ್ನು ಕೂಲಿ ಮಹಿಳೆಯರಿಗೆ ತಿಳಿಯಪಡಿಸಿದರೆ "ಹೋಗ್ರವ್ವ ನಮ್ಮ ಮಕ್ಕಳು ವಿದ್ಯೆ ಕಲಿತು ಏನಾಗಬೇಕು ಉಣ್ಣಾಕ್ಕೆ ಒಂದಿಷ್ಟು ಇದ್ರೆ ಸಾಕು ಗಂಡ ಕುಡುಕನೇ ಆಗಿರಲಿ ಅವನು ಕೊಡುವ ಸುಖಕ್ಕಿಂತ ಇನ್ನು ಏನು ಬೇಕ್ರವ್ವ ನಮಗೆ ? "ಸುಮ್ನೆ ಹೋಗ್ರಿ ಅವ್ವ" ಅಂತ ತಿಳಿಯ ಹೇಳಿ ಹೊರಟ ಮಹಿಳೆಯರನ್ನು ಸಾಗ ಹಾಕುತ್ತಾರೆ. ಹೀಗಿರುವಾಗ ಮಕ್ಕಳಿಗೆ ಸಾಕ್ಷರತೆ ಕಲಿಸಲೇ ಬೇಕು ಎಂಬುವುದು ಸಮಾಜದ ಉದ್ದೇಶವಾಗಿರುತ್ತದೆ. ಜೀವನದ ಬಗ್ಗೆ ಅವರು ಯೋಚಿಸುವುದಿಲ್ಲ. ಕ್ಷಣಿಕ ಸುಖಕ್ಕಾಗಿ ದಿನವಿಡಿ ದುಡಿತ್ತಾ ದುಡಿತ್ತಾ ಕಂಗಾಲಾದ ಮಹಿಳೆ ಅನಾರೋಗ್ಯ ಪಡುತ್ತಾಳೆ. ದುಡಿಯದೆ ಇರುವ ಗಂಡನು ಕುಡಿತಕ್ಕೆ ಹಣ ಸಿಕ್ಕದಾಗ ಇನ್ನೊಂದು ಸಂಬಂಧವನ್ನು ಬೆಳಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಂತೆ ಆಗುತ್ತದೆ. ಇಂತಹ ಸಂದರ್ಭದಲ್ಲಿ ಮಹಿಳೆಯರು ಜಾಗೃತಿಕರಾಗಬೇಕು ಮತ್ತು ಮಹಿಳಾ ಸಂಘಟನೆಗಳನ್ನು ಮಹಿಳೆಯರು ಸ್ಪಂದಿಸಬೇಕು.

ಈವಾಗ ನಾನಾ ರೀತಿಯಲ್ಲಿ ಸಕಲ ಸೌಕರ್ಯದ ಸಮುದಾಯವನ್ನು ಏರ್ಪಡಿಸಿ ಸರಕಾರದಿಂದ ಸಹಾಯಧನ ಪಡೆದು ತನ್ನ ಜೀವನಕ್ಕೆ ಒಂದು ಉದ್ಯೋಗ ಕಲ್ಪಿಸುವ ಅವಕಾಶವನ್ನು ಗ್ರಾಮೀಣ ಬ್ಯಾಂಕ್‌ಗಳು ನಾನಾ ರೀತಿಯಲ್ಲಿ ಮಹಿಳೆಯರಿಗೆ ಕಲ್ಪಿಸತೊಡಗಿದೆ. ಹಾಗೂ ರಿಯಾಯಿತಿ ದರದಲ್ಲಿ ಸಾಲದ ಬಡ್ಡಿಯನ್ನು ನಿಗದಿ ಪಡಿಸುವಂತೆ ಸಾಲವನ್ನು ಮಹಿಳೆಯರಿಗೆ ಸ್ವಯಂ ಉದ್ಯೋಗಕ್ಕೆ ಅವಕಾಶ ಕಲ್ಪಿಸ ತೊಡಗಿದೆ. ಹೀಗೆ ಹಸು ಸಾಕುವುದು, ಹಂದಿ ಸಾಕುವುದು, ಸಣ್ಣ ಪುಟ್ಟ ಗುಡಿ ಕೈಗಾರಿಕೆಗಳಿಗೆ, ಕೃಷಿ ಮಾಡುವುದು, ವ್ಯಾಪಾರ ಮಾಡಲು ಮಕ್ಕಳ ವಿದ್ಯಾಭ್ಯಾಸಕ್ಕೆ ಹೀಗೆ ಅನೇಕ ರೀತಿಯಲ್ಲಿ ಮಹಿಳೆಯರಿಗೆ ಸಾಲವನ್ನು ಗ್ರಾಮೀಣ ಬ್ಯಾಂಕ್‌ನಿಂದ ಒದಗಿಸಿ ಕೊಡುತ್ತದೆ. ಮತ್ತು ಕಡಿಮೆ ದರದಲ್ಲಿ ಸಾಲದ ಬಡ್ಡಿಯನ್ನು ತೀರಿಸಲು ಅವಕಾಶವಿದೆ. 20 ಮಹಿಳೆಯೊಳ ಗೊಂಡಂತೆ ಒಂದು ಸಂಘವೆಂದು ರೂಪಿಸಿ ಆ ಸಂಘಕ್ಕೆ ಒಂದು ಹೆಸರನ್ನು ಸೂಚಿಸಿ ಆ ಹೆಸರುಗಳಲ್ಲಿ ಉಳಿತಾಯ ಪುಸ್ತಕದ ಠೇವಣಿಯನ್ನು ತೆಗೆದು ತಿಂಗಳಿಗೆ ಎರಡು ಅಥವಾ ನಾಲ್ಕರಂತೆ ಎಲ್ಲಾರು ಸಭೆ ಸೇರಿ ಹೇಗೆ ಉಳಿತಾಯವನ್ನು ಮಾಡಬೇಕು ಎಂಬುವುದರ ಬಗ್ಗೆ ಚರ್ಚೆ ನಡೆಸಬೇಕಾಗುತ್ತದೆ. ಮತ್ತು ಈ ಸಭೆಯಲ್ಲಿ ಪ್ರತಿನಿಧಿ ಒಂದು ಹಾಗೂ ಪ್ರತಿನಿಧಿ ಎರಡು ಎಂದು ಆರಿಸಿಕೊಂಡು ಎರಡು ಪ್ರತಿನಿಧಿಗಳು ಜಂಟಿ ಠೇವಣಿಯನ್ನು ಸಾಧರಪಡಿಸಿಕೊಳ್ಳಬೇಕು ಮತ್ತು ಎಲ್ಲಾ ಸದಸ್ಯರ ಒಳಗೊಂಡಂತೆ ಒಂದೊಂದು ಠೇವಣಿಯ ಪುಸ್ತಕವನ್ನು ತೆರೆಯಬೇಕಾಗುತ್ತದೆ. ಸದಸ್ಯರ ಅನುಕೂಲಕ್ಕೆ ತಕ್ಕಂತೆ ಸಭೆ ಸೇರುವ ಸಂದರ್ಭದಲ್ಲಿ ಅವರವರ ಠೇವಣಿ ಪುಸ್ತಕದಲ್ಲಿ ಅವರ ಹಣವನ್ನು ನೊಂದಾಯಿಸಬೇಕು ಮತ್ತುಎಲ್ಲಾ ಸದಸ್ಯರ ಹಣವನ್ನು ಬ್ಯಾಂಕ್‌ಗಳಲ್ಲಿ ಜಮ ಮಾಡಿ ಕಷ್ಟವಿರುವ ಸದಸ್ಯರು ಅವರಿಗೆ ಎಷ್ಟು ಬೇಕು ಅಂದರೆ ಸದಸ್ಯರ ಒಟ್ಟು ಎಷ್ಟು ಹಣ ಸಂಗ್ರಹವಾಗಿದೆ ಎಂಬುವುದರ ಮೇಲೆ ಅಲ್ಲಿಯ ಹಣವನ್ನು ಚೆಕ್‌ನ ಮೂಲಕ ಸಾಲ ಪಡೆದುಕೊಳ್ಳಬಹುದು. ಆ ಸಾಲಕ್ಕೆ ಬಡ್ಡಿಯ ದರವು 2%ರಂತೆ ಸದಸ್ಯರಿಗೆ ರಿಯಾಯಿತಿಯಾಗಿದ್ದು 4ಅಥವಾ 6 ತಿಂಗಳ ಅಥವಾ 10 ತಿಂಗಳ ಕಾಲಾವಧಿಯಲ್ಲಿ ಹಣ ಮರುಪಾವತಿ ಮಾಡತಕ್ಕದ್ದು ಮತ್ತು ಹೆಚ್ಚು ಹಣ ಬೇಕೆಂದರೆ ಸಂಘವು ಎಷ್ಟು ಅಭಿವೃದ್ಧಿಯಾಗಿದೆ ಯಾವ ಯೋಜನೆಗಳನ್ನು ಹಮ್ಮಿಕೊಂಡಿದೆ. ಎಷ್ಟು ಉಳಿತಾಯ ಮಾಡಿದೆ ಮತ್ತು ಲಾಭವನ್ನು ಎಷ್ಟು ಪಡೆದಿದೆ ಎಂಬುವುದು ಒಳಗೊಂಡಿರುತ್ತದೆ. ಹೆಚ್ಚಿನ ಹಣಕ್ಕೆ ಸಂಘದ ಮೂಲಕ 50,60 ಸಾವಿರ ರೂಗಳನ್ನು ಸಾಲಪಡೆಯಬಹುದು. ಅವುಗಳ ವಿವರಣೆ ಬ್ಯಾಂಕ್‌ಗಳಿಗೆ ತೋರಿಸತಕ್ಕದ್ದು. ಮಕ್ಕಳ ವಿದ್ಯಾಭ್ಯಾಸಕ್ಕೆ ಅಥವಾ ಉದ್ಯೋಗಕ್ಕೆ, ವ್ಯಾಪಾರಕ್ಕೆ ಬಳಸಬಹುದು. ಕೂಲಿ ಮಾಡುವ ಮಹಿಳೆಯಾದರೆ ವಾರಕ್ಕೆ 10

ತನ್ನನ್ನು ತಾನು ಗೆಲ್ಲುವುದೇ ಪ್ರಪಂಚದಲ್ಲಿನ ಅತಿದೊಡ್ಡ ವಿಜಯ

ರೂಗಳಂತೆ ಉಳಿತಾಯವನ್ನು ಮಾಡಬಹುದು. ಇವುಗಳಲ್ಲಿ A.P.L.ಮತ್ತು B.P.C. ಎಂಬ ಎರಡು ಪಂಗಡಗಳಿದ್ದು A.P.L.ರವರಿಗೆ ಬ್ಯಾಂಕ್‌ನಿಂದ ರಿಯಾಯಿತಿದರ ಬಡ್ಡಿದರ ಸಿಕ್ಕುವುದಿಲ್ಲ ಆದರೆ B.P.C.ರವರಿಗೆ ರಿಯಾಯಿತಿ ದರ ಲಭ್ಯವಾಗಿದ್ದು. ಕೆಲವೊಂದು ಕಡೆ ಮಹಿಳೆಯರು ಹಣ ಉಳಿತಾಯ ಮಾಡಿ ಸ್ವಾವಲಂಭಿಯಾಗಿದ್ದು ಗಂಡಸರಿಗೆ ಸಮಾನತೆ ಹೊಂದಿ ಅಬಲೆ ಅಲ್ಲ,ಸಬಲೆ ಎಂದು ತೋರಿಸಿಕೊಟ್ಟಿದ್ದಾರೆ ಮತ್ತು ಹೆಣ್ಣಿನ ಶೋಷಣೆ ಕಡೆ ಗಮನ ಹರಿಸಿದರೆ ನಾನಾ ರೀತಿಯಲ್ಲಿ ಹೆಣ್ಣಿಗೆ ವರದಕ್ಷಿಣೆಯ ಪಿಡುಗು ಮತ್ತು ಮಾನಸಿಕ ಹಿಂಸೆಯನ್ನು ಕೊಡುವುದು ನಾವು ದಿನಪತ್ರಿಕೆಯಲ್ಲಿ ಓದಬಹುದು. ಹಾಗೂ ಗಂಡು ನಾನಾ ರೀತಿಯಲ್ಲಿ ಹೆಣ್ಣನ್ನು ಸೋಸುತ್ತಾ ಹೋದರೆ, ತಾನು ಹೆಣ್ಣಿನ ಗರ್ಭದಲ್ಲಿ ಹುಟ್ಟಿಲ್ಲವೇ ಎಂಬುವುದನ್ನು ಮರೆಯಬೇಕಾಗುತ್ತದೆ. ಸಮಾಜದಲ್ಲಿ ಹೆಣ್ಣಿಗೆ ಒಂದು ಪ್ರಾಮುಖ್ಯತೆವಾದ ಸ್ಥಾನವನ್ನು ಕೊಟ್ಟಿರುತ್ತಾರೆ. ಹೆಣ್ಣನ್ನು ವಿಶ್ವರೂಪಿಣಿಯೆಂತಲೂ, ಆದಿಶಕ್ತಿಯೆಂತಲೂ, ದೇವತೆ ಯೆಂತಲೂ ನಾನಾ ರೀತಿಯಲ್ಲಿ ಕರೆಯಲ್ಪಡುತ್ತಾರೆ. ಎಲ್ಲಾ ದೇವಸ್ಥಾನಗಳಲ್ಲಿ ದೇವತೆಗಳಿಗೆ ಒಂದು ಸ್ಥಾನವಿದೆ. ಹಾಗೂ ಮನೆಯಲ್ಲಿ ಹೆಣ್ಣಿಲ್ಲದ ಮನೆ ಅದು ಮನೆಯಲ್ಲ ಹೆಣ್ಣು ಮನೆಗೆ ಶೋಭಿತೆ. ಅವಳು ನಗು ನಗುತ್ತಾ ಇದ್ದರೆ ಆ ಮನೆ ಸ್ವರ್ಗವಿದ್ದಂತೆ ಎಲ್ಲಾ ಕಷ್ಟ ಕಾರ್ಪಣ್ಯಕ್ಕೆ ಹೆಣ್ಣು ಮೂಲ ಕಾರಣವಾಗಿರುತ್ತಾಳೆ. ಹೀಗಿರುವಾಗ ಹೆಣ್ಣನ್ನು ನಾನಾ ರೀತಿಯಲ್ಲಿ ದೂಷಿಸುವುದು ಸರಿಯಲ್ಲ. ಹೆಣ್ಣು ದುಡಿದು ಸೋತ ಜೀವಕ್ಕೆ ಕೆಲವೊಮ್ಮೆ ಮನರಂಜನೆಯು ಮುಖ್ಯವಾದುದು. ಅವುಗಳನ್ನು ಸಂಘದ ಮೂಲಕ ನಾವು ಪ್ರದರ್ಶಿಸಲು ಅವಕಾಶವನ್ನು ಸದಸ್ಯರೇ ಕಲ್ಪಿಸತಕ್ಕದು ಮತ್ತು ಹೊಸ ಹೊಸ ವಿಷಯವನ್ನು ಸಂಘಟನೆಗಳಿಂದ ತಿಳಿದುಕೊಳ್ಳಬಹುದು ಹಾಗೂ ಹೊಸ ರುಚಿಯ ತಿಂಡಿಗಳನ್ನು ಗುಡಿ ಕೈಗಾರಿಕೆಗಳನ್ನು ಕಲ್ಪಿಸತಕ್ಕದು ಮತ್ತು ಇತರ ಸಂಘಟನೆಗಳಿಗೆ ಸ್ಪಂದಿಸುವುದು ಮತ್ತು ಇದೊಂದು ಒಳ್ಳೆಯ ಅವಕಾಶವನ್ನು ಕಲ್ಪಿಸುತ್ತದೆ. ನೋವು ನಲಿವುಗಳಿಗೆ ಸ್ಪಂದಿಸುವಂತಹ ಶಿಸ್ತು ಮತ್ತು ಸ್ವಸಹಾಯ ಮಹಿಳಾ ಸಂಘವಾಗಿರುತ್ತದೆ. ಸಮಾಜದಲ್ಲಿ ಸ್ತ್ರೀಯರ ಬಗ್ಗೆ ಲೋಪ ದೋಷಗಳ ನಿವಾರಣೆಗೆ ಪ್ರತಿಭಟನೆ ರೂಪದಲ್ಲಿ ತನ್ನ ಮಹತ್ವವನ್ನು ಪಡೆದುಕೊಳ್ಳುವುದು. ಕುಟುಂಬದ ಆದಾರ ಸ್ತಂಭವಾಗಿರುವ ಗಂಡಸರು ನಾನಾ ದೋಷಗಳಿಗೆ ಮಾರು ಹೋಗಿದ್ದರೆ, ಕುಡಿತ, ಜೂಜು, ಅನೈತಿಕ ಸಂಬಂಧ ಇದ್ದರೆ ಅವುಗಳನ್ನು ಖಂಡಿಸಿ ಪ್ರತಿಭಟನೆ ಕಾರ್ಯವನ್ನು ಪಡೆದು ಕೊಳ್ಳುವುದು. ಇಂತಹದಕ್ಕೆ ಅವಕಾಶ ಕೊಡದ ರೀತಿಯಲ್ಲಿ ನಾವು ಒಟ್ಟಾಗಿ ಶ್ರಮಿಸಬೇಕೆಂದು ಈ ಸಂಘದ ಉದ್ದೇಶವಾಗಿರುತ್ತದೆ. ಹೀಗೆ ಸ್ವಸಹಾಯ ಸಂಘದಿಂದ ಅನೇಕ ರೀತಿಯಲ್ಲಿ ಮಹಿಳೆಯ ಮಾನಸಿಕ ಒತ್ತಡವನ್ನು ಪರಿಹರಿಸುವಲ್ಲಿ ಯಶಸ್ವಿಯನ್ನು ಕಂಡುಕೊಂಡಿದೆ. ಸಂಘದಿಂದ ಲಾಭವನ್ನು ಮನರಂಜನೆಯನ್ನು ಮತ್ತು ಧೈರ್ಯ, ಸ್ಪೂರ್ತಿ ಮತ್ತು ಕೆಲಸ ಕಾರ್ಯಗಳನ್ನು ವ್ಯವಹಾರ ಜ್ಞಾನವನ್ನು ಪಡೆದುಕೊಳ್ಳಬಹುದು. ಈ ಎಲ್ಲಾ ಅನುಕೂಲಕ್ಕೆ ತಕ್ಕಂತೆ ಬ್ಯಾಂಕುಗಳು ಎಲ್ಲಾ ರೀತಿಯಲ್ಲಿ ಮಹಿಳೆಯರಿಗೆ ಸಹಕಾರ ನೀಡುತ್ತದೆ. ವಿಶ್ವದ ಎಲ್ಲಾ ಮಹಿಳೆಯರು ಇಂತಹ ಒಂದು ರೀತಿಯ ಅನುಕೂಲಕರವಾದ ವ್ಯವಸ್ಥೆಯನ್ನು ಸದುಪಯೋಗ ಪಡೆದುಕೊಂಡರೆ ಮಹಿಳೆಯರು ವಿಶ್ವಕ್ಕೆ ದಾರಿ ದೀಪವಾಗಲು ಸಂಶಯವಿಲ್ಲ. ಮಹಿಳೆಯರು ಅಬಲೆಯಲ್ಲ ಸಬಲೆ ಎಂದು ವಿಶ್ವಕ್ಕೆ ತಿಳಿಯಪಡಿಸೋಣ. ಬನ್ನಿ ಸಹೋದರಿಯರೇ ಮತ್ತು ಮಹಿಳೆಯರೇ ಸ್ವಸಹಾಯ ಸಂಘದ ಲಾಭವನ್ನು ಪಡೆಯಿರಿ. ಎಲ್ಲಾ ರೀತಿಯಲ್ಲಿ ಮಹಿಳೆಯರಿಗೆ ದೇವರು ಅನುಗ್ರಹ ಕೊಡಲಿ ಎಂದು ಆಶಿಸೋಣಾ.

ಆಜದ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

---

# ಗೌಡ ಸಮಾಜದ ನೂತನ ಅಧ್ಯಕ್ಷರಾಗಿ ಅನಂತ ರಾಂ ಆಯ್ಕೆ



ಪೈಕೇರ ಅನಂತರಾಂ

ಕೊಡಗು ಗೌಡ ಸಮಾಜ ಮಡಿಕೇರಿಯ ನೂತನ ಅಧ್ಯಕ್ಷರಾಗಿ ಪೈಕೇರ ಅನಂತರಾಂ ಅಪ್ಪಯ್ಯ ಅವರು ಆಯ್ಕೆ ಯಾಗಿದ್ದಾರೆ. ಉಪಾಧ್ಯಕ್ಷರಾಗಿ ಪೇರಿಯನ ಜಯಾನಂದ ಪೂವಯ್ಯ, ಕಾರ್ಯ ದರ್ಶಿ ಯಾಗಿ ಕೋಳಿ ಮುಡಿಯನ ಆರ್. ಅನಂತ ಕುಮಾರ್ ಹಾಗೂ ಖಜಾಂಚಿಯಾಗಿ ಕೊಳಂಬೇರ ಬಿ. ಶಿವಪ್ಪ ಅವರುಗಳು ನೇಮಕಗೊಂಡಿದ್ದಾರೆ.

ನಿರ್ದೇಶಕರುಗಳಾಗಿ ಕುಂಬುಗೌಡನ ಎ. ಉತ್ತಪ್ಪ, .ಯಾಲದಾಳು ಡಿ. ಕೇಶವಾನಂದ, ಕೆದಂಬಾಡಿ ಎಂ. ಪ್ರಸನ್ನ, ಹುದೇರಿ ಯು. ನಾಗೇಶ್, ಕೋರನ ಸಿ. ವಿಶ್ವನಾಥ್, ಕಾಳೇರಮ್ಮನ ಎ. ಪಾಲಾಕ್ಷ,ಪಂಜಿಪಳ್ಳ ಎಂ. ವೆಂಕಪ್ಪ, ಚೆರಿಯಮನೆ ರಾಘವಯ್ಯ, ಕೂಡಕಂಡಿ ಕಾವೇರಮ್ಮ ಸೋಮಣ್ಣ, ಪಡಿಕಲ್ ಯು. ಚೆಂಗಪ್ಪ ಹಾಗೂ ದಂಬೆಕೋಡಿ ಎಸ್. ಪೂವಯ್ಯ ಅವರುಗಳು ಆಯ್ಕೆಯಾಗಿದ್ದಾರೆ.

ನೂತನ ಅಧ್ಯಕ್ಷರಾಗಿ ಆಯ್ಕೆಯಾಗಿರುವ ಅನಂತರಾಮ್ ಅವರು ಮಾತನಾಡಿ ಪ್ರಸ್ತುತ ಗೌಡ ಸಮಾಜ, ಸಾಂಸ್ಕೃತಿಕ ಅಕಾಡೆಮಿ, ಮಹಿಳಾ ಒಕ್ಕೂಟದ ಎಲ್ಲಾ ಕಾರ್ಯಕ್ರಮಗಳು ಕಲ್ಯಾಣ ಮಂಟಪದಲ್ಲೇ ನಡೆಯುತ್ತಿವೆ. ಜನಾಂಗದ ಇತರ ಕಾರ್ಯಕ್ರಮಗಳನ್ನು ನಡೆಸಲು ಗೌಡ ಸಮಾಜದ ಹಿಂಭಾಗದಲ್ಲಿ ನೂತನ ಸಭಾಂಗಣವನ್ನು ನಿರ್ಮಿಸುವ ಉದ್ದೇಶ ಹೊಂದಿರು ವುದಾಗಿ ತಿಳಿಸಿದರು.

---

**ಸಹಾಯ ಮಾಡುವ ಕೈಗಳು ಪ್ರಾರ್ಥನೆ ಮಾಡುವ ತುಟಿಗಳಿಗಿಂತ ಶ್ರೇಷ್ಠ**

# ನಯನ ಮನೋಹರ - ಭಾಗಮಂಡಲದ ಪಾರೆಕಟ್ ಜಲಪಾತ



ಮಳೆಗಾಲ ಪ್ರಾರಂಭವಾಗುತ್ತಲೇ ಬೇಸಿಗೆಯಲ್ಲಿ ತೀರಾ ಸೊರಗಿ ಹೋಗಿರುವ ಜಲಪಾತಗಳೆಲ್ಲಾ ಚೇತರಿಸಿಕೊಂಡು ಮೈದುಂಬಿ ಭೋರ್ಗರೆಯುವ ನೈಜ ದೃಶ್ಯಗಳನ್ನು ಮಳೆಗಾಲದಲ್ಲಿ ಮನೆಯಿಂದ ಹೊರಬಿದ್ದು ಒಂದಷ್ಟು ಶ್ರಮಪಟ್ಟರೆ ಹತ್ತಿರದಿಂದ ವೀಕ್ಷಿಸಬಹುದಾಗಿದೆ. ಪ್ರಕೃತಿ ಜೊತೆಗೆ ಆ ಪ್ರಕೃತಿದತ್ತ ಸೌಂದರ್ಯದ ಅಲೆಗಳು ಸದಾ ಮನಸ್ಸಿನಲ್ಲಿ ಸೌಂದರ್ಯದ ಅಲೆಗಳು ಸದಾ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿರುತ್ತದೆ. ಇಂತಹ ಜಲಪಾತಗಳ ಸಾಲಿನಲ್ಲಿ ಭಾಗಮಂಡಲ ಸಮೀಪದ ಪಾರೆಕಟ್ ಜಲಪಾತವೂ ಒಂದು.

ಭಾಗಮಂಡಲಕ್ಕೆ ಹೋಗುವ ಪ್ರವಾಸಿಗರು ತಲಕಾವೇರಿಯಲ್ಲಿ ಹುಟ್ಟಿ ಹರಿಯುವ ಕಾವೇರಿ ನದಿಯ ಸೌಮ್ಯತೆಯೊಂದಿಗೆ ಬೃಹತ್ ಬಂಡೆಕಲ್ಲುಗಳ ಮೇಲಿಂದ ತನ್ನ ರೌದ್ರಾವತಾರದೊಂದಿಗೆ ಇಳೆಗೆ ಧುಮುಕುವ ಪಾರೆಕಟ್ ಜಲಧಾರೆಯ ದೃಶ್ಯವನ್ನು ನೋಡಿ ರೋಮಾಂಚನಗೊಳ್ಳುವುದರಲ್ಲಿ ಆಶ್ಚರ್ಯವಿಲ್ಲ. ಭಾಗಮಂಡಲದ ಸರ್ಕಾರಿ ಆಸ್ಪತ್ರೆಯ ಸಮೀಪದ ಬಲಭಾಗ ರಸ್ತೆಯಲ್ಲಿಯ ಒಳಭಾಗಕ್ಕೆ ಸುಮಾರು ಎರಡು ಕಿ. ಮೀ. ಸಾಗಿ ಕುದುಪಜೆ ಪಿ. ನಂಜಪ್ಪನವರ ಮನೆಯ ಅಂಗಳದಲ್ಲಿ ಜಲಪಾತಕ್ಕೆ ದಾರಿಯ ವಿವರ ಕೇಳುತ್ತಿದ್ದಂತೆಯೇ ತಣ್ಣನೆಯ ಗಾಳಿಯೊಂದಿಗೆ ಜಲಪಾತ ಭೋರ್ಗರೆತದ ನಿನಾದ ನಿಧಾನವಾಗಿ ಕಿವಿಗೆ ಅಪ್ಪಳಿಸುತ್ತದೆ.

ಮನೆಯವರೊಂದಿಗೆ ಅಥವಾ ಅವರು ತೋರಿದ ದಾರಿಯಲ್ಲಿ ಮುಂದೆ ನಡೆದು ಗದ್ದೆಯ ಏರಿಯಲ್ಲಿ ಹೆಜ್ಜೆ ಇಡುತ್ತಾ ಕಣ್ಣೆತ್ತಿ ನೋಡಿದರೆ ಮುಂಭಾಗದಲ್ಲಿ ಹರಿಯುವ ಜಲಪಾತವು ದೊಡ್ಡ ಕಾನನವನ್ನು ಸೀಳಿಕೊಂಡು ನಮ್ಮೆದುರಿಗೆ ಬರುತ್ತಿದೆಯೇನೊ ಎಂಬಂತೆ ಭಾಸವಾಗುತ್ತದೆ. ಕುದುಪಜೆ ನಂಜಪ್ಪ ಅವರ ಮನೆಯವರೆಗೆ ವಾಹನ ಹೋಗಲು ಸೌಕರ್ಯವಿದ್ದು, ಮುಂದಿನ ದಾರಿಯನ್ನು ನಡೆದುಕೊಂಡೇ ಕ್ರಮಿಸಬೇಕಾಗುತ್ತದೆ. ಜಲಪಾತ ವೀಕ್ಷಣೆಗೆ ಸಾಕಾಗುತ್ತದೆ. ಆದರೆ ಚಾರಣ ಪ್ರಿಯರಿಗಾದರೆ ಒಂದು ದಿನವನ್ನೇ ಮೀಸಲಿಡಬೇಕಾಗುತ್ತದೆ.

ಬ್ರಹ್ಮಗಿರಿಯ ಬೆಟ್ಟದ ಸಾಲುಗಳ ನಡುವೆ ಹರಿದು ಬರುವ ಬೀಮಕಲ್ಲು ಹೊಳೆಯ ಸುಮಾರು 400 ಅಡಿಗಳ ಎತ್ತರದಿಂದ ಜಲಪಾತವಾಗಿ ಧುಮುಕುವ ಸೌಂದರ್ಯವನ್ನು ಪೂರ್ಣವಾಗಿ ವೀಕ್ಷಿಸಲು ಅಸಾಧ್ಯವಾಗಿರುವ ಈ ಜಲಪಾತವು ಬೃಹತ್ ಬಂಡೆಕಲ್ಲುಗಳ ಮೇಲಿಂದ ಭೋರ್ಗರೆಯುವ ಜಲಪಾತವನ್ನು ಸ್ಥಳೀಯರು ಪಾರೆಕಟ್ (ಸಂಪೂರ್ಣ ಬಂಡೆಗಳಿಂದಲೆ ಕೂಡಿದೆ) ಜಲಪಾತ ಎಂದು ಕರೆಯುತ್ತಾರೆ. ಈ ಜಲಪಾತವು ಒಂದೇ ಸಮನೆ ಕೆಳಗೆ ಧುಮುಕದೆ ಸುಮಾರು 6 ರಿಂದ 7 ಬೃಹತ್ ಮೆಟ್ಟಿಲುಗಳಂತೆ ಜೋಡಿಸಿಟ್ಟು ಬಂಡೆಗಳಲ್ಲಿ ಇಳಿದಿಳಿದು ಬರುವ ಬೆಳ್ಳಿ ನೊರೆಗಳಿಂದ ಕೂಡಿ ಮುನ್ನುಗ್ಗುವ ಜಲಧಾರೆಯ ರಭಸ ಒಂದೆಡೆ ಭಯವನ್ನುಂಟು ಮಾಡುವಂತಿದ್ದರೂ ಬಂಡೆಕಲ್ಲುಗಳಿಂದಿಳಿದು ಬಂದು ಕಾಲುಗಳನ್ನು ನಿಧಾನವಾಗಿ ತುಂಬಿಸುವ ತಣ್ಣನೆಯ ನೀರು ಮನಸ್ಸಿಗೆ ಮುದ ನೀಡುತ್ತದೆ. ಕೆಳಭಾಗದಿಂದ ನೋಡಿದರೆ ನಾಲ್ಕು ಬಂಡೆಗಳ ಮೆಟ್ಟಿಲುಗಳಿಂದ ಇಳಿದು ಬರುವ ಜಲಧಾರೆಯ ದೃಶ್ಯವನ್ನು ಮಾತ್ರ ವೀಕ್ಷಿಸಬಹುದಾಗಿದೆ. ಇನ್ನುಳಿದ ಭಾಗದ ಜಲಧಾರೆಯ ವೀಕ್ಷಣೆಗೆ ಚಾರಣ ಕೈಗೊಳ್ಳಬೇಕಾಗಿದೆ. ಆದರೆ ಚಾರಣ ಕೈಗೊಳ್ಳುವದು ಸ್ವಲ್ಪ ಪ್ರಯಾಸದ ಕೆಲಸ. ಮಳೆಗಾಲದ ಸಂಜೆಗತ್ತಲಿನ ವಾತಾವರಣ, ಕಾಲಿಟ್ಟ ಜಾಗದಲ್ಲೆಲ್ಲಾ ರಕ್ತ ಹೀರುವ ಜಿಗಣೆಗಳು, ಕಲ್ಲು-ಮುಳ್ಳುಗಳ ಜೊತೆಗೆ ದಟ್ಟ ಕಾಡಾಗಿರುವುದರಿಂದ ಮರದ ಕೊಂಬೆ-ರೆಂಬೆಗಳ ನಡುವೆ ದಾರಿ ಮಾಡಿಕೊಂಡು ಸಾಗುವುದು ಒಂದು ವಿಶೇಷ ಅನುಭವ ನೀಡುತ್ತದೆ. ಸುಮಾರು 30 ವರ್ಷ ಗಳ ಹಿಂದೆ ಜಲಪಾತದ ಸಂಪೂರ್ಣ ಸೌಂದರ್ಯವನ್ನು ವೀಕ್ಷಿಸಲು ಸಾಧ್ಯವಾಗುತ್ತಿತ್ತು. ಈಗ ಈ ಜಲಪಾತದ ಇಕ್ಕೆಲಗಳಲ್ಲಿ ಬೃಹದಾಕಾರದ ಮರಗಳು ಬೆಳೆದು ನಿಂತಿರುವುದರಿಂದ ಇದರ ಸಹಜ ಸೌಂದರ್ಯಕ್ಕೆ ಧಕ್ಕೆಯುಂಟಾಗಿದೆ. ಅಂದಿನ ಜಲಪಾತದ ದೃಶ್ಯ ಇನ್ನೂ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ ಎಂದು ನಂಜಪ್ಪನವರು ತಮ್ಮ ಹಳೆಯ ನೆನಪುಗಳನ್ನು ಮೆಲುಕು ಹಾಕುತ್ತಾರೆ.

ಮಳೆಗಾಲ ಪ್ರಾರಂಭದಿಂದ ಅಂದರೆ ಜೂನ್ ತಿಂಗಳಿನಿಂದ ಸೆಪ್ಟೆಂಬರ್‌ವರೆಗೆ ಜಲಪಾತದ ಅಬ್ಬರತೆಯ ಸೌಂದರ್ಯವನ್ನು ಸವಿಯಲು ಸೂಕ್ತ ಸಮಯ. ವಿಪರೀತ ಮಳೆಯಾದರೆ ಜಲಪಾತದ ಹತ್ತಿರಕ್ಕೆ ತೆರಳಲು ಅಸಾಧ್ಯವಾಗುತ್ತದೆ. ಪತ್ರಿಕಾ ವರದಿಗಾರ ಜೋಡಿ ಇದುವರೆಗೂ 25 ಕ್ಕೂ ಹೆಚ್ಚು ಸೆರೆ ಹಿಡಿದ ಛಾಯ ಚಿತ್ರದಲ್ಲಿ ಕೊಯನಾಡಿನ ಕಲ್ಲಾಳ ಜಲಪಾತವನ್ನು

10 ನೇ ಪುಟಕ್ಕೆ

ಗಾದೆಗಳು : ಶಾಸ್ತ್ರ ಹೇಳೋಕೆ ಬದನೆ ಕಾಯಿ ತಿನ್ನೋಕೆ

# ವಿಸ್ಮಯ ಜಗತ್ತಿನಲ್ಲಿ ಪ್ರಕೃತಿಯ ನಿಗೂಢಗಳು

ಪ್ರಕೃತಿ ತನ್ನ ಅಗಾಧ ಗರ್ಭದಲ್ಲಿ ಎಷ್ಟೊಂದು ಅದ್ಭುತಗಳನ್ನು ನಿಗೂಢಗಳನ್ನು ಅಡಗಿಸಿಟ್ಟುಕೊಂಡಿರ ಬಹುದು ಇದಕ್ಕೆ ಖಚಿತ ಉತ್ತರ ಹೇಳಲು ಸಾಧ್ಯವಿಲ್ಲ ಪ್ರಕೃತಿಯ ಕೆಲವು ನಿಗೂಢಗಳು ಸರಳವಾಗಿ ಪ್ರಕಟವಾಗಿ ಬೆರಗುಂಟು ಮಾಡುವಂಥವು ಮತ್ತೆ ಕೆಲವು ಭಾರಿ ನಿಗೂಢಗಳಾಗಿ ಬಹುಕಾಲ ತಜ್ಞರ ತಲೆ ತಿನ್ನುವಂಥವು ಅಂತಹದೇ ನಿಗೂಢತೆಯ ಗೂಡು ಅಯಸ್ಕಾಂತೀಯ ಬೆಟ್ಟ ಮತ್ತು ಉಲ್ಟಾ ಜಲಪಾತ.

*ಅಯಸ್ಕಾಂತೀಯ ಬೆಟ್ಟ*: ಸಣ್ಣ ದಿನ್ನೆಯೇರಲು ತಿಣುಕವ ವಾಹನಗಳು ಬೆಟ್ಟದ ಏರಿನಲ್ಲಿ ಸುಲಭವಾಗಿ ಓಡಲು ಸಾಧ್ಯವೇ? ಖಂಡಿತ ಸಾಧ್ಯವಿಲ್ಲವೆಂದೇ ಹೇಳಬೇಕಾಗುತ್ತದೆ. ಆದರೆ ಕೆನಡದ ಮಾಂಕ್ಟನ್ ಎಂಬ ನಗರಕ್ಕೆ ಉತ್ತರದಲ್ಲಿ ಹಲವು ಕಿಲೋಮೀಟರ್ ದೂರದಲ್ಲಿ ಒಂದು ವಿಶಿಷ್ಟವಾದ ಬೆಟ್ಟವಿದೆ. ವಾಹನಗಳು ಈ ಬೆಟ್ಟದ ಮೇಲಿನ ಹಾದಿಯನ್ನು ಸುಲಭವಾಗಿ ಏರುತ್ತವೆ. ವಾಹನ ಚಾಲಕ ವಾಹನಗಳನ್ನು ಮೇಲಕ್ಕೆ ಓಡಿಸಿಕೊಂಡು ಹೋಗಲು ಪ್ರಯತ್ನ ಮಾಡಬೇಕಾದಾಗ ಅಗತ್ಯವೇ ಇರುವುದಿಲ್ಲ. ಈ ಬೆಟ್ಟದಲ್ಲಿ ಅಯಸ್ಕಾಂತೀಯ ಆಕರ್ಷಣೆ ಇರಬೇಕು. ಅದರಿಂದಾಗಿ ವಾಹನಗಳು ಸುಲಭವಾಗಿ ಅದರ ಮೇಲೆ ಚಲಿಸುವುದು ಸಾಧ್ಯವಾಗಿರಬೇಕು ಎಂದು ಮೊದಲು ನಂಬಲಾಗಿತ್ತು. ಆದರೆ ಅದು ಸರಿಯಾದ ಅಭಿಪ್ರಾಯ ವಾಗಿರಲಿಲ್ಲ. ಸುತ್ತಲೂ ಇರುವ ವಿಶಿಷ್ಟ ನಮೂನೆಯ ಭೂ ಪ್ರದೇಶದಿಂದಾಗಿ ಅದು ಬೆಟ್ಟದ ಏರಿನಂತೆ ಭಾಸವಾಗುತ್ತದೆ ಯೆಂಬ ಅಭಿಪ್ರಾಯವೇನೋ ಈಗ ಪ್ರಬಲವಾಗಿಲ್ಲದ್ದರೂ ಅದರ ಹಿಂದಿನ ನಿಗೂಢವನ್ನು ಭೇಧಿಸುವ ಪ್ರಯತ್ನಗಳು ಇನ್ನು ನಡೆಯುತ್ತಲೇ ಇವೆ.

*ಉಲ್ಟಾ ಜಲಪಾತ* : ಜಲಪಾತಗಳಲ್ಲಿ ನೀರು ಎತ್ತರದಿಂದ ಕೆಳಗೆ ಧುಮುಕುತ್ತದೆ. ತಾನೇ. ಅದಕ್ಕೇ ಅವುಗಳನ್ನು ಜಲಪಾತ ಎನ್ನುವುದು. ಆದರೆ ಜಲಪಾತಗಳಲ್ಲಿ ಕೆಳಗೆ ಬಿದ್ದ ನೀರು ಪುನಃ ಮೇಲಕ್ಕೆ ಜಿಗಿಯುವುದೇ? ನಿಸರ್ಗ ಸೃಷ್ಟಿಸಿದ ಅಂಥ ಉಲ್ಟಾ ಜಲಪಾತ ಕೂಡ ಇದೆ. ಫಂಡಿ ಕೊಲ್ಲಿಗೆ ಸಮೀಪದಲ್ಲಿ ಕೆನಡಾದ ಪ್ರದೇಶದಲ್ಲಿ ಹರಿಯುವ ಸೆಂಟ್ ಜಾನ್ ನದಿಯ ನೀರು ಧುಮುಕಿ ಈ ಜಲಪಾತ ನಿರ್ಮಾಣವಾಗಿದೆ. ಆ ಭಾಗದಲ್ಲಿ ಸೆಂಟ್ ಜಾನ್ ನದಿಗೆ ಕಟ್ಟಲಾಗಿರುವ ಅತ್ಯಂತ ದೊಡ್ಡದಾದ ಸೇತುವೆ ಮೇಲೆ ನಿಂತಾಗ ಈ ಜಲಪಾತ ನಿರ್ದಿಷ್ಟ ಸಮಯದಲ್ಲಿ ಉಲ್ಟಾ ಜಲಪಾತವಾಗಿ ಪರಿಣಮಿಸುವ ಅದ್ಭುತ ನೋಟವನ್ನು ಕಾಣಬಹುದು. ಇದನ್ನು ರಿವರ್ಸಿಂಗ್ ಫಾಲ್ಸ್ ಎಂದೇ ಕರೆಯ ಲಾಗುತ್ತದೆ. ಸುಮಾರು 18-19 ಮೀಟರುಗಳಷ್ಟು ಎತ್ತರದ ಅಲೆಗಳು ಬಡಿದು ನದಿಯ ನೀರನ್ನು ಹಿಂದಕ್ಕೆ ತಳ್ಳುತ್ತವೆ. ಹೀಗೆ ರಭಸದಿಂದ ಹಿಮ್ಮೆಟ್ಟುವ ನೀರು ಜಲಪಾತವನ್ನು ಜೋರಾಗಿ ಅಪ್ಪಳಿಸಿ ಮೇಲಕ್ಕೇರುತ್ತದೆ. ಇದುವೇ ವಿಸ್ಮಯ ಜಗತ್ತಿನಲ್ಲಿ ಪ್ರಕೃತಿಯ ಆಟ.

ಸೂರ್ಯಕಾಂತರವರ 'ಪ್ರಕೃತಿಯ ನಿಗೂಢಗಳು'
ಎಂಬ ಪುಸ್ತಕದಿಂದ ಸಂಗ್ರಹಿಸಿರುವುದು
ಯಿಂದ : ಗುಡ್ಡನ ಕುಸುಮ, ಕುಶಾಲನಗರ.

# ವಿ.ವಿ. ಮಟ್ಟದ ಗುಡ್ಡಗಾಡು ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ



ಪ್ರಸಕ್ತ ವರ್ಷ ಉಡುಪಿಯಲ್ಲಿ ನಡೆದ ಮಂಗಳೂರು ವಿ. ವಿ. ಮಟ್ಟದ ಗುಡ್ಡಗಾಡು ಓಟದ ಸ್ಪರ್ಧೆಯಲ್ಲಿ ಮಡಿಕೇರಿ ಫೀ. ಮಾ. ಕಾರ್ಯಪ್ಪ ಕಾಲೇಜಿನ ಅಂತಿಮ ಬಿ.ಎ. ವಿದ್ಯಾರ್ಥಿ ಕೋಚನ ತೇಜಸ್ ಅವರು ಪ್ರಥನ ಸ್ಥಾನ ಪಡೆದಿದ್ದಾರೆ. ಈ ಸಾಧನೆ ಮಾಡಿರುವ ಅವರು, ಮೂರನೇ ಬಾರಿ ರಾಷ್ಟ್ರೀಯ ವಿಶ್ವ ವಿದ್ಯಾನಿಲಯ ಮುಕ್ತ ಪುರುಷರ ಓಟಕ್ಕೆ ಆಯ್ಕೆಯಾಗಿದ್ದಾರೆ. ಮೈಸೂರು ವಿಭಾಗೀಯ ದಸರಾ ಕ್ರೀಡಾಕೂಟಜದ 5 ಸಾವಿರ ಮೀಟರ್ ಓಟದಲ್ಲಿ ದ್ವಿತೀಯ ಸ್ಥಾನ ಗಳಿಸಿರುವ ಅವರು, ರಾಜ್ಯಮಟ್ಟಕ್ಕೆ ಆಯ್ಕೆಯಾಗಿದ್ದಾರೆ. ಅಕ್ಟೋಬರ್ 11 ರಂದು ಕೇರಳದ ಕೊಟ್ಟಾಯಂನಲ್ಲಿ ನಡೆಯಲಿರುವ ರಾಷ್ಟ್ರೀಯ ಗುಡ್ಡಗಾಡು ಓಟದ ಸ್ಪರ್ಧೆಯಲ್ಲಿ ಮಂಗಳೂರು ವಿ. ವಿ.ಯನ್ನು ಪ್ರತಿನಿಧಿಸಲಿದ್ದಾರೆ. ಇವರು ಗಾಳಿಬೀಡುವಿನ ಕೋಚನ ಬಸಪ್ಪ ದಂಪತಿಯ ಪುತ್ರ.

\- ಸಂಗಾತಿ

9 ನೇ ಪುಟದಿಂದ

ಹೋಲುವ ಈ ಪಾರೆಕಟ್ ಜಲಧಾರೆಯ ಸೊಬಗನ್ನೊಮ್ಮೆ ವೀಕ್ಷಿಸಿದರೆ ಮನಸ್ಸಿನ ಪಟಲದಲ್ಲಿ ಜಲಪಾತದ ಭೋರ್ಗರೆತದ ನಿನಾದವು ಪ್ರತಿಧ್ವನಿಸುತ್ತಿರುತ್ತದೆ.

ಕಳೆದ 5 ವರ್ಷಗಳಿಂದ ಮಾನವನು ತನ್ನ ಲಾಭಕ್ಕಾಗಿ ಮರ ಗಿಡಗಳನ್ನು ಕಡಿದು ಭೂಮಿಯನ್ನು ಬರಡುಮಾಡಿದ್ದು ಇದರಿಂದಾಗಿ ಎಲ್ಲೆಡೆ ಮಳೆ ಕಡಿಮೆ ಆಗಿದ್ದು ಧುಮ್ಮಿಕ್ಕುವ ಜಲಧಾರೆಯು ಕೂಡ ತನ್ನ ಜೀವವನ್ನ ಕಳೆದುಕೊಂಡಿದ್ದು ಕಳೆದ ವರ್ಷ ಆಗಸ್ಟ್ ಕೊನೆಯ ದಿನದಂದು 95.88 ಮಳೆಯಾಗಿತ್ತು. ಈ ವರ್ಷ 125.15 ರಷ್ಟು ಮಳೆಯಾಗಿದ್ದು ಧುಮ್ಮಿಕ್ಕುವ ಜಲಧಾರೆಗಳಲ್ಲಿ ಒಂದಾದ ಭಾಗಮಂಡಲದ ಕುದುಪಜೆ ನಂಜಪ್ಪನವರ ಮನೆಯ ಪಕ್ಕದಲ್ಲಿ ಇರುವ ಪಾರೆಕಟ್ ಜಲಧಾರೆಯ ಸಚಿತ್ರ ವರದಿಯನ್ನು ಸಂಗಾತಿ ಓದುಗರಿಗಾಗಿ ನೀಡಲಾಗಿದೆ. ಇನ್ನು ಮುಂದೆ ಆದರೂ ಮನುಷ್ಯನು ಪರಿಸರವನ್ನು ನಾಶ ಮಾಡುವುದನ್ನು ನಿಲ್ಲಿಸಿ ಧುಮ್ಮಿಕ್ಕುವ ಜಲಧಾರೆಗಳಿಗೆ ಜೀವ ತುಂಬುವರೇ ಕಾದು ನೋಡಬೇಕಾಗಿದೆ.

ಚಿತ್ರ-ಕುಯ್ಯಮುಡಿ ಸುನಿಲ್, ಸಣ್ಣಪುಲಿಕೊಟು, ಮೂರ್ನಾಡು.

ಬರಹ - ಟಿ.ಸಿ. ನಾಗರಾಜ್, ಮೂರ್ನಾಡು.

## ಹಗ್ಗ ಜಗ್ಗಾಟದಲ್ಲಿ ಹ್ಯಾಟ್ರಿಕ್ ಗಳಿಸಿದ ಮುತ್ತಾರ್ಮುಡಿ ಮಹಿಳೆಯರು

ಕೊಡಗಿನ ಜಾನಪದ ಹಬ್ಬವಾದ ಕೈಲುಮೂರ್ತವನ್ನು ವಿಶೇಷವಾಗಿ ಜಿಲ್ಲೆಯಲ್ಲಿ ಹಾಗೂ ಹೊರಗಡೆ ನೆಲೆಸಿರುವ ಜಿಲ್ಲೆಯ ಜನರು ಬಹಳ ಅದ್ದೂರಿಯಾಗಿ ನಡೆಸುತ್ತಾರೆ. ಹಬ್ಬದ ದಿವಸ ಕ್ರೀಡೋತ್ಸವಗಳು, ನೋಡುವ ಪ್ರೇಕ್ಷಕರ ಕಣ್ಣುಗಳಿಗೆ ಆನಂದವನ್ನು ಹಾಗೂ ಉತ್ತೇಜವನ್ನು ನೀಡುತ್ತದೆ. ಅದರಲ್ಲಿ ಹಗ್ಗ ಜಗ್ಗಾಟದ ಸ್ಪರ್ಧೆ ಎರಡು ಗುಂಪುಗಳ ನಡುವೆ ತಮ್ಮ ಶಕ್ತಿಯನ್ನು ಸಾಬೀತು ಪಡಿಸುತ್ತದೆ. ಈ ಸ್ಪರ್ಧೆ ಕೊಡಗಿನಲ್ಲಿ ಬಿಟ್ಟರೆ ಬೇರೆ ಕಡೆ ಕಾಣುವುದು ವಿರಳವಾಗಿರುತ್ತದೆ.

ಇತ್ತೀಚೆಗೆ ಮೂರ್ನಾಡು ವ್ಯಾಪ್ತಿಯ ಆರು ಗ್ರಾಮಗಳಾದ ಐಕೊಳ, ಕಿಗ್ಗಾಲು, ಕೋಡಂಬೂರು, ಬಾಡಗ, ಕಾಂತೂರು, ಮುತ್ತಾರ್ಮುಡಿ ಹಾಗೂ ಜಿಲ್ಲೆಯ ಬೇರೆ ಕಡೆಯಿಂದ ಆಗಮಿಸಿದ ಗುಂಪುಗಳ ನಡುವೆ ನಡೆದ ಸ್ಪರ್ಧೆಯಲ್ಲಿ ಮುತ್ತಾರ್ಮುಡಿ ಮಹಿಳಾ ತಂಡದವರು ಮೂರು ವರ್ಷದಿಂದ ನಿರಂತರವಾಗಿ ಪ್ರಥಮ ಸ್ಥಾನವನ್ನು ಬೇರೆಯವರಿಗೆ ಬಿಟ್ಟು ಕೊಟ್ಟಿಲ್ಲದಿರುವುದು ಹೆಮ್ಮೆಯ ವಿಚಾರ. ವೀಕ್ಷಿಸುವವರು ಆ ಸಮಯದಲ್ಲಿ ತಮ್ಮ ತಮ್ಮ ಜನಾಂಗದವರೇ ಗೆಲ್ಲಬೇಕೆಂಬ ಮನೋಭಾವವನ್ನು ಹಾಗೂ ಛಲವನ್ನು ಇಟ್ಟುಕೊಂಡಿರುವುದು ಸಹಜ. ಈ ವ್ಯಾಪ್ತಿಯಲ್ಲಿ ಕೊಡವ ಜನಾಂಗದವರೇ ಸ್ವಲ್ಪ ಮಟ್ಟಿಗೆ ಜಾಸ್ತಿಯಿದ್ದು, ಅವರ ಪ್ರೋತ್ಸಾಹ ಬೆಂಬಲ ಹುಮ್ಮಸ್ಸಿನಿಂದ ಇತ್ತು. ನಮ್ಮಲ್ಲಿ ಕೆಲವರು ಮರೆಯಲ್ಲಿ ನಿಂತು ವೀಕ್ಷಿಸುವುದು ಭಾರವಾದ ಮನಸ್ಸಿನಿಂದ ಪ್ರೋತ್ಸಾಹ ನೀಡುವುದು ಕಂಡುಬರುತ್ತಿತ್ತು. ಸ್ಪರ್ಧಿಗಳಿಗೆ ವೀಕ್ಷಿಸುವವರು ಬೆಂಬಲ ನೀಡಿದರೆ ಅವರಿಗೆ ಇಮ್ಮಡಿ ಸ್ಫೂರ್ತಿ ಬರುವುದು ಸತ್ಯ. ಇನ್ನಾದರೂ ನಮ್ಮವರು ಇಂತಹ ಅವಕಾಶ ಸಿಕ್ಕಿದರೆ ತಮ್ಮ ಮನಸ್ಸಿನ ಸ್ಫೂರ್ತಿ ಅನಿಸಿಕೆಗಳನ್ನು ಬಿಚ್ಚು ಮರೆಯಿಲ್ಲದೆ ಮನಃ ಪೂರ್ವಕವಾಗಿ ಪ್ರೇರೆಪಿಸಲಿ. ಇದು ಮುಂಬರುವ ಪೀಳಿಗೆಗಳಿಗೆ ದಾರಿದೀಪವಾಗುತ್ತದೆ. ಈ ಹಿಂದೆ ಮುತ್ತಾರ್ಮುಡಿ ಮಹಿಳಾ ತಂಡದವರು ಈ ಸ್ಪರ್ಧೆಯನ್ನು ಜಿಲ್ಲೆಯ ಬೇರೆ ಕಡೆ ಜಯಿಸಿರುತ್ತಾರೆ. ಅದರಲ್ಲೂ ದೇರಜೆ ಕುಟುಂಬಸ್ಥರ ಗದ್ದೆಯಲ್ಲಿ ಕಟ್ಟೆಮಾಡು ಮಹಿಳಾ ತಂಡದವರ ನಡುವೆ ನಡೆದ ತೀವ್ರ ಪೈಪೋಟಿಯಲ್ಲಿ 8 ನಿಮಿಷಗಳ ಕಾಲ ಪ್ರೇಕ್ಷಕರನ್ನು ತುದಿಗಾಲಲ್ಲಿ ನಿಲ್ಲಿಸುವಂತೆ ಮಾಡಿದನ್ನು ಇಲ್ಲಿ ಸ್ಮರಿಸಬಹುದು.

ಮಹಿಳೆಯರು ತಂತಮ್ಮ ಸೀರೆಗಳನ್ನು, ಸೊಂಟಕ್ಕೆ ಸಿಕ್ಕಿಸಿ ಹಗ್ಗ ಜಗ್ಗುವಾಗ ಅವರನ್ನು ಕ್ರೀಡಾ ಮನೋಭಾವದಿಂದ ಮುಖಚರ್ಯೆಯನ್ನು ಗಮನಿಸಿದರೆ ವೀರವನಿತೆ ಓನಕೆ ಓಬವ್ವಳ ನೆನಪು ಬರುತ್ತದೆ. ಮುನಿದಾಗ ಸ್ತ್ರೀ ಶಕ್ತಿಯೇ ಬೇರೆ ಯಾದ್ದಗಿರುತ್ತದೆ. ಎಲ್ಲದಕ್ಕೂ ದೇವರ ಕೃಪೆ ಮುಖ್ಯ. ಗೆಲ್ಲಲಿ, ಸೋಲಲಿ, ದೇವರಿಗೆ ನಾವು ತಲೆಬಾಗಬೇಕು. ಹಾಗೂ ನುಡಿದುದನ್ನು ನಾವು ನೆರವೇರಿಸಬೇಕು. ನಿಧಾನಗತಿಯಲ್ಲಾದರು ಫಲ ಖಂಡಿತವಾಗುತ್ತದೆ. ಜೈ ಮುತ್ತಾರ್ಮುಡಿ ವೀರ ವನಿತೆಯವರೇ,

ಬರಹ : ತೆಕ್ಕಡೆ ಬಿ. ರಘುನಾಥ, ಮುತ್ತಾರ್ಮುಡಿ.

## ನಂಬಿದ್ರೆ ನಂಬಿ - ಬಿಟ್ರೆ ಬುಡಿ

1. ನಿಮ್ಮ ಮೊಣಕ್ಕೈನ ನೀವು ನೆಕ್ಕಿಕಾದಲಲೆ!
2. ಮೊಸಳೆ ಅದ್ರ ನಾಲಿಗೇನ ಹೊರಕ್ಕೆ ಚಾಚಿಕಾದುಲೆ!
3. ಸೀಗಡಿ ಮೀನ್‌ದ್ ಹೃದಯ ಇರ್ದು ಅದ್ರ ತಲೆಯೊಳಗೆ!
4. ಹಂದಿಗಳಿಗೆ ತಲೆಯೆತ್ತಿ ಆಕಾಶ ನೋಡಿಕಾದುಲೆ!
5. ಬಸುರಿ Gold Fish ಗಳಿಗೆ ಟ್ವಿಟ್‌ತ ಹೆಸರ್!
6. ಭೂಲೋಕಲಿರುವ 50% ಜನ್ರಗೆ ಫೋನ್‌ಲಿ ಮಾತಾಡಿ ಗೊತ್ತ್‌ಲೆ!
7. ಕುದುರೆಗ ವಾಂತಿ ಮಾಡುದ್ನೆ.
8. ನೀವ್ ಜೋರಾಗಿ ಸೀನಿರ್ ಮೊಣಕ್ಕೆ ಎಲುಬು ಮುರಿವ ಸಾಧ್ಯತೆ ಉಟ್ಟು. ಸೀನುದನ್ನ ಬಲವಂತವಾಗಿ ತಡಿಯಕ್ಕೆ ಪ್ರಯತ್ನ ಪಟ್ಟರೆ ತಲೆ ಅಥವಾ ಕುತ್ತಿಗೆಲಿರುವ ರಕ್ತನಾಳ ಒಡ್ದ್ ಸಾಯುವ ಸಾಧ್ಯತೆ ಉಟ್ಟು. ಸೀನ್‌ಕಾಕನ ಬಲವಂತವಾಗಿ ಕಣ್ಣ್ ತೆಕ್ಕಂಡಿರಿಕೆ ಪ್ರಯತ್ನ ಪಟ್ಟರೆ ಕಣ್ಣ್‌ಗುಡ್ಡೆಗ ಹೊರಗೆ ಹಾರುವ ಸಾಧ್ಯತೆ ಉಟ್ಟು!
9. ಎರಡ್ ಇಲಿಗ ಸೇರಿ 18 ತಿಂಗಳೊಳಗೆ ಒಂದು ಮಿಲಿಯನ್ ಇಲಿಗಳ ಸಂಸಾರ ಸೃಷ್ಟಿ ಮಾಡರ್!
10. ಒಂದ್ ಗಂಟೆ ಕಾಲ ಕಿವಿಯೊಳಗೆ Head phone ಹಾಕಿ ಕಂಡಿದ್ದರೆ, ಕಿವಿಯೊಳಗಿರುವ ಕ್ರಿಮಿಗ 700 ಪಟ್ಟು ಹೆಚ್ಚಾಗುವ ಸಾಧ್ಯತೆ ಉಟ್ಟು!
11. ಬಾತ್‌ಕೋಳಿಗ ಕೂಗುವ ಸದ್ದ್ ಪ್ರತಿಧ್ವನಿಸುದ್ನೆ!ಯಾಕೇತ ಯಾರಿಗೂ ಗೊತ್ತ್ನೆ!!
12. Lipstick ಗಳಲ್ಲಿ ಮೀನಿನ ಪ್ರಲೇಪ ಉಪಯೋಗಿಸುವೆ!
13. ಫಿಂಗರ್ ಪ್ರಿಂಟ್‌ನಂಗೇ ನಾಲಿಗೆಗಳ ಪ್ರಿಂಟ್ ಒಬ್ಬರಂಗೆ ಇನ್ನೊಬ್ಬರದಿರುದ್ನೆ!
14. ನಾನ್‌ಬರ್ದ ಈ ಸಂಗತಿಗಳ್ನ ಓದಿದ 90% ಜನ ಅವರ ಮೊಣಕ್ಕೈನ ನೆಕ್ಕಿಕೆ ನೋಡುವೇನಾ?!!

-ಎಡಿಕೇರಿ ಸುದರ್ಶನ್, ಬೆಂಗಳೂರು.

## ಬಾಯ್‌ಫ್ರೆಂಡ್

ಸುರುಗೆ ಅಂವ ಹಾಯ್ ಬಾಯ್<br>
ಈಗ ಇಬ್ಬರೂ<br>
ಬಾಯಿಗೆ ಬಾಯಿ

**ಹಾರೈಸುದು:**<br>
ಸಂಘ ಮಾಡ್ಸಿಳೊ<br>
ಶಾಲೆ ಕಟ್ಸಿಳೊ<br>
ಬ್ಯಾಂಕ್ ತೆರ್ದ್ಳೊ<br>
ಕೂಟ ಕೂಡ್ಸಿಳೊ<br>
ಎಲ್ಲದಕ್ಕೂ ಹಾರೈಸುವೆ.

- ಚಂದ್ರಾವತಿ ಬಡ್ಡಡ್ಕ, ಸುಳ್ಯ.

# ಒಕ್ಕಲಿಗ ಬಂಧು ನೀ ಒಂದಾಗಿ ಬಾ-ಒಂದಾಗು ಬಾ

**ಡಾ.ಗುಡ್ಡೆ ರಾಘವಗೌಡ, ಡೇಟನ್, ಒಹಾಯೊ**

ಒಕ್ಕಲಿಗ ಬಂಧು ನೀ ಒಂದಾಗಿ ಬಾ-ಒಂದಾಗು ಬಾ
ವಿಶ್ವದೆಲ್ಲೆಡೆಯಿಂದ ಒಡಗೂಡಿ ಬಾ
ನಿನ್ನ ಹಿರಿಮೆಯ ಹಿರಿಯ ಗುರುತಿಸಲು ಬಾ
ನಿನ್ನ ಕಿರಿ ಕಂದರಿಗೆ ದಾರಿ ತೋರಲು ಬಾ
ಸಾಗರದ ತಟದಿಂದ, ಮಲೆನಾಡ ಮಡಿಲಿಂದ
ಕಾವೇರಿ, ಕುಮಾರಧಾರೆ, ಪಯಸ್ವಿನಿಯ ಒಡಲಿಂದ
ತೆನೆ ಸಿರಿಯ ಕಣಜದ ಬಯಲ್ನಾಡ ಕಡೆಯಿಂದ
ಒಕ್ಕಲಿಗ ನೀನಿಂದು ಒಂದಾಗಿ ಬಾ, ಒಂದಾಗು ಬಾ
ಹಿಮಗಿರಿಯ ಮಡಿಲಿಂದ, ಗಂಗೆಯಾ ಅಲೆಯಿಂದ
ಕಾಶ್ಮೀರದೆಲೆಯಿಂದ ಕನ್ಯಾಕುಮಾರಿಯಡಿಯಿಂದ
ಬಂಗಾಳ ಬನದಿಂದ, ಗುಜರಾತಿನ ಬಯಲಿಂದ
ಭಾರತಯ ಮಗು ನೀನು, ಒಂದಾಗಿ ಬಾ-ಒಂದಾಗು ಬಾ
ದುಡಿ ದುಡಿದು ದಣಿದಿರುವೆ, ಅಲೆದಲೆದು ಸೋತಿರುವೆ
ಪರರ ಸುಖಕ್ಕಾಗಿ ನೀ ಸರ್ವಸ್ವ ಅರ್ಪಿಸಿಹೆ
ಗಡಿಯಲ್ಲಿ ಸೇನಾನಿ, ಬಯಲಲ್ಲಿ ನೇಗಿಲಯೋಗಿ
ಒಕ್ಕಲಿಗ ಕೂಟಕ್ಕೆ ಬಾ ಇಂದು ಒಂದಾಗಿ
ನಿನ್ನ ಬೆವರ ಹನಿಯಿಂದ ತಾಯ್ನೆಲವು ಸಿಂಚಿಹುದು
ನಿನ್ನ ಶೌರ್ಯದ ಬಲವು ಎಲ್ಲ ಮನೆ ಮಾತಾಗಿಹುದು
ನಿನ್ನ ಬಲಿದಾನವು ಎಲ್ಲರಿಗೂ ಮೆಚ್ಚಿಹುದು
ನಿನ್ನ ಪ್ರೇಮದ ಹೊನಲು ಎಲ್ಲೆಲ್ಲೂ ಹರಿದಿಹುದು
ನೀ ನಡೆದ ದಾರಿಯನು ಹಿಂತಿರುಗಿ ನೋಡು
ನಿನ್ನ ಮುಂದಿನ ಜನಕೆ ಕಾಣಿಕೆಯ ನೀಡು
ಒಕ್ಕಲಿಗ ಕೂಟಕ್ಕೆ ಹೊಸ ಕನಸ ನೀಡು
ಮಲೆನಾಡ ಉನ್ನತಿಗೆ ನೀನು ಹೆಣಗಾಡು
ಇತಿಹಾಸ ಪುಟಗಳನು ತಿರುವಿ ನೀ ನೋಡು
ಮರೆಯಾದ ಮಣಿಗಳನ್ನು ಮತ್ತೊಮ್ಮೆ ಜೋಡು
ತಾಯ್ನೆಲಕೆ ತನುವಿತ್ತ ಹಿರಿಯರನು ನಮಿಸು
ಇಂದಿಗೆ ಮುಂದೆಗೆ ಹೊಸ ಕನಸ ನೆನೆಸು
ನೀನು ಬಂದಿಹೆಯಂತೆ ಗೌಡ ದೇಶದಿಂದ
ಗಂಗಾ ತಟದ ಈಗಿನ ಬಂಗಾಳದಿಂದ
ತಮಿಳು ನಾಡಿನಲ್ಲಿ ನೀನು ನೆಲೆಸಿದೆಯಂತೆ
ಮತ್ತೆ ಕರ್ನಾಟಕಕೆ ನೀ ಕಾಲಿಟ್ಟೆಯಂತೆ
ದಾರಿಯಲಿ ಬಂದೆಯಾ, ದೋಣಿಯಲಿ ಬಂದೆಯಾ?
ಅಂಗ, ವಂಗ, ಕಳಿಂಗದಲಿ ನೀನೊಮ್ಮೆ ನಿಂದೆಯಾ?
ಎಲ್ಲಿಯೂ ನಿಲ್ಲದೆಯೆ ನೀ ದಕ್ಷಿಣಕೆ ಬಂದೆಯಾ?
ಕಾವೇರಿ ಮಗು ನೀನು ಆದಿಯಿಂದಿಲ್ಲಿದ್ದೆಯಾ?
ಗತಕಾಲ ವೈಭವದ ಸಹಭಾಗಿ ನೀನು
ಗಂಗ, ಕದಂಬ, ರಾಷ್ಟ್ರಕೂಟರ ಒಡನಾಡಿ ನೀನು
ವಿಜಯನಗರ, ಇಕ್ಕೇರಿ, ಯಲಹಂಕದಲ್ಲಿದ್ದೆ
ಕೆಂಪೇ ಗೌಡನ ಜೊತೆಗೆ ಬೆಂಗಳೂರ ನೆಲೆಸಿದ್ದೆ
ಬಯಲ ಸೀಮೆಯ ಮೆರೆಸಿ ಮಲೆನಾಡ ಸೇರಿದ್ದೆ
ನೀ ನಡೆದ ನೆಲದಲ್ಲಿ ಸಿರಿಯನ್ನು ತಂದೆ
ಶಾಂತಿ ಕಾಲದಿ ರೈತ, ಯುದ್ಧದಲಿ ಭಟ ನೀನು
ಪ್ರೇಮ, ಸೌಹಾರ್ದತೆಯ ಪ್ರತಿಮೂರ್ತಿ ನೀನು

ಸ್ವಾತಂತ್ರ್ಯ ಸಂಗ್ರಾಮದ ಇಪ್ಪತ್ತು ವರುಷಗಳ ಹಿಂದೆ
ಬಲಿದಾನ ಮಾಡಿರುವೆ ಎಲ್ಲರಿಂದಲೂ ಮುಂದೆ
ಇತಿಹಾಸ ಪುಟಗಳಲ್ಲಿ ನಿನ್ನ ಮರೆತಿಹರು
ನಿನ್ನ ಕೆಚ್ಚೆದೆಯನ್ನು ಕೆಲವರೇ ಅರಿತಿಹರು
ಸಾವಿರದೆಂಟ್ನೂರ ಮೂವತ್ತೇಳನೆ ಇಸವಿಯ ಸುದ್ದಿ
ಕೊಡಗಿನ ಚಿಕ್ಕವೀರರಾಜ ಗದ್ದುಗೆಯಿಂದಿಳಿದಿದ್ದ
ಬ್ರಿಟಿಷರ ದಬ್ಬಾಳಿಕೆ ಬಲುಜೋರಿನಲ್ಲಿತ್ತು,
ಸ್ವತಂತ್ರತೆಯ ಬೆಳಕಿನ ಕಿಡಿ ಮಲೆನಾಡಿನಲ್ಲಿ ಹರಡಿತ್ತು.
ಅಪರಂಪರ, ಕಲ್ಯಾಣ ಸ್ವಾಮಿಯ ಜೊತೆ ಸೇರಿ
ಕೆದಂಬಾಡಿ ರಾಮಪ್ಪ ಗೌಡ ನಡೆಸಿದ ಜಯಭೇರಿ
ಗುಡ್ಡೆ ಅಪ್ಪಯ್ಯಗೌಡ ಇದ್ದನಂದು ಜೊತೆಗೆ
ಗೌಡರ ದುಂಡು ಎಚ್ಚೆತ್ತು ನಡೆಯಿತವರ ಜೊತೆಗೆ
ಅಮರ ಸುಳ್ಯದಲಿ ಸೇರಿದರು ಅಂದೆಲ್ಲ ಗೌಡರು
ಪುತ್ತೂರು ತಲಪಿದರು ಸಾವಿರದಿನ್ನೂರು ಭಟರು
ಮಂಗಳೂರ ವಶ ಪಡಿಸಿದರು ಆ ವೀರ ಸೈನಿಕರು
ಹದಿಮೂರು ದಿನಗಳ ತನಕ ಮಂಗಳೂರ ಆಳಿದರು
ಮಂಗಳೂರಲಿ ದೇಶಕ್ಕೆ ಗಲ್ಲಿಗೇರಿದರಂದು
ಗುಡ್ಡೆ ಅಪ್ಪಯ್ಯ,ರಾಮಪ್ಪ ಗೌಡರ ತಂಡ ಅಂದು
ಕಾಲದ ಮರೆಯಲ್ಲಿ ಅವರು ಮರೆಯಾಗಿಹರು
ನಿನ್ನ ಧಮನಿಗಳಲ್ಲಿ ದೇಶ ಪ್ರೇಮ ತುಂಬಿಹರು
ನವ ಯುಗದ ಮಹಾ ವೀರರು ಸಾವಿರಾರು
ದಶ ದಿಸೆಗೆ ಹರಡಿದೆ, ಅವರೆಲ್ಲರ ಹೆಸರು
ಕೆ. ಹೆಚ್. ರಾಮಯ್ಯ,ಬಿ. ಪುಟ್ಟಯ್ಯ
ಕೆಂಗಲ್ ಹನುಮಂತಯ್ಯ, ಪಟೇಲು ಚೌಡಯ್ಯ
ಕನಕಪುರ ಕರಿಯಪ್ಪ, ಯಶೋಧರಾ ದಾಸಪ್ಪ
ಕನ್ನಡದ ವಾಲ್ಮೀಕಿ ಡಾ. ಕೆ. ವಿ.ಪುಟ್ಟಪ್ಪ
ನಿನ್ನನ್ನೊಟ್ಟಾಗಿಸಿಹುದು ಆದಿ ಚುಂಚನ ಗಿರಿ ಮಠ
ಒಂದಾಗಿ ಶ್ರಮಿಸಿದರೆ ಒಕ್ಕಲಿಗರ ಯಶಸ್ಸು ದಿಟ
ಒಕ್ಕಲಿಗ ಬಂಧು ನೀ ಬಂದುದಿಲ್ಲೇಕೆ?
ಮಕ್ಕಳ ಮದುವೆಯ ಕನಸೊಂದು ಸಾಕೆ?
ಕನಸೊಂದು ಕಟ್ಟು ನೀ ಒಕ್ಕಲಿಗ ಕೂಟಕ್ಕೆ
ಒಂದಾಗಿ ದುಡಿ ನೀ ಎಲ್ಲರಭ್ಯುದಯಕ್ಕೆ
ಕನಸೊಂದ ಕಾಣುತಿಹೆ ಬಹುದಿನಗಳಿಂದ
ಹೇಳಲೆನಗಂಜಿಕೆ-ಕೇಳಿ ಉದಾರ ಮನಸಿಂದ
ಕಟ್ಟೋಣ ಬನ್ನಿ ಒಕ್ಕಲಿಗ ವಿಶ್ವವಿದ್ಯಾಲಯ
ಜ್ಞಾನ ಜ್ಯೋತಿಯ ಬೆಳಗೆ ಆದರ್ಶ ನಿಲಯ
ಡೊನೇಶನ್ ಕಾಲೇಜು ನಮ್ಮಲ್ಲಿ ಕಡಿಮೆಯಿಲ್ಲ
ಬಡವರಿಗೆ ವಿದ್ಯೆಯ ಸವಲತ್ತು ದೊರಕಿಲ್ಲ
ವಿದ್ಯೆಯ ವ್ಯಾಪಾರ ಸಮಾಜ ಸೇವೆಯೇ ಅಲ್ಲ
ಜಾತಿ ಮತ ಭೇದಗಳ ಮನೋವೃತ್ತಿ ಬೇಕಿಲ್ಲ
ಪಂಡಿತ ಮದನ ಮೋಹನ ಮಾಲವೀಯರ ಕನಸು
ಬನಾರಸ್ ಹಿಂದೂ ವಿಶ್ವ ವಿದ್ಯಾಲಯ ನೆಲೆಸಿದೆ ಸೊಗಸು
ಟಾಗೋರ್ ಕಟ್ಟಿಹರು ಸರಸ್ವತಿಯ ಸದನ
ವಿಶ್ವದೇಕ್ಯಕ ನೂತನ ಶಾಂತಿನಿಕೇತನ

ಸಾವುಕಾರನಾದ್ರೂ, ಸಾವು ತಪ್ಪೀತೇ, ರಾಯನಾಗಿದ್ದಾರೂ ಜೈಲು ತಪ್ಪೀತೆ

ಹಂತ ಹಂತದಲ್ಲಿ ಬೆಳೆಯಲಿ ವಿದ್ಯಾಲಯ
ಅಮೇರಿಕದ ಒಕ್ಕಲಿಗರ ಕನಸಿನಾ ನಿಲಯ
ಹನಿಕೂಡಿ ಹಳ್ಳ, ತೆನೆ ಕೂಡಿ ಕಣಜದಂತೆ
ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತೆ
ಮೊದಲು ಹಾಕೋಣ ನಾವು ಸಣ್ಣ ಅಡಿಪಾಯ
ಆಸ್ಪತ್ರೆಗೆ, ಶಾಲೆಗೆ ಮಾಡೋಣ ಸಹಾಯ
ಸ್ಕಾಲರ್ಶಿಪ್, ಕಟ್ಟಡ, ಪುಸ್ತಕ, ಸವಲತ್ತು
ಟ್ರಸ್ಟಲ್ಲಿ ಇಟ್ಟುಬಿಡಿ ಹಿರಿಯರ ಹೆಸರಲ್ಲಿ ಮುತ್ತು
ಪ್ರತಿಯೊಂದು ಕುಟುಂಬ ತನ್ನ ಗ್ರಾಮವನು ಅಳವಡಿಸಿ
ಬೇಸಿಗೆಯ ರಜೆಯಲ್ಲಿ ಊರಿಗೆ ಮಕ್ಕಳನು ಕಳಿಸಿ
ಸೇವೆ ಮಾಡಲಿ ಅವರು ಶಾಲೆಗೆ, ಆಸ್ಪತ್ರೆಗೆ
ನಿಮ್ಮ ಹುಟ್ಟಿನ ನೆಲದ ಎಲ್ಲ ರೀತಿಯ ಏಳಿಗೆಗೆ
ಒಂದಾಗಿ ಬೆರೆಯಲಿ ರೈತ ಬಂಧುಗಳಲ್ಲಿ
ಅಕ್ಕರೆಯಿಂದ ಎಲ್ಲ ತನ್ನ ಬಾಂಧವರಲ್ಲಿ
ಅವರೇ ಹಾಕಲಿ ಹೊಸ ಕೆಲಸಕ್ಕೆ ಅಡಿಪಾಯ
ದೊರಕಲಿ ಇದರಿಂದ ಬಡವರಿಗೆ ಸಹಾಯ
ಒಟ್ಟಿಗೆ ಹಾಕೋಣ ನಾವು ವಿದ್ಯಾಲಯಕ್ಕೆ ಬುನಾದಿ
ಅತಿ ಉತ್ಸಾಹದಿಂದ ಹೊಸ ಕನಸಿಗೆ ನಾಂದಿ
ಬೆಳಗಲೀ ದೇಗುಲ ಮಲೆನಾಡ ಮಡಿಲಲ್ಲಿ
ಹರಡಲಿ ಅದರ ಖ್ಯಾತಿ ವಿಶ್ವದೆಲ್ಲೆಡೆಯಲ್ಲಿ
ನಾನು ನನ್ನದು ಎಂಬ ಮೋಹ ತ್ಯಜಿಸುವ ಬನ್ನಿ
ರಾಜಕೀಯದ ಕೂಟ ನೀತಿಯ ಮರೆತು ಬನ್ನಿ
ಕಿರು ಕಾಣಿಕೆಯಿಂದ ಒಕ್ಕಲಿಗರುಪ್ಪರಿಗೆ ತುಂಬುತ ಬನ್ನಿ
ಒಕ್ಕಲಿಗ ಪರಿಷತ್ತಿನ ವಿಶ್ವವಿದ್ಯಾಲಯ ಕಟ್ಟ ಬನ್ನಿ
ಸಪ್ತ ಸಮುದ್ರದಾಚೆ ಬಂದಿರುವೆ ನೀನು
ನಿನ್ನ ಸಾಧನೆಗೆ ಸದಾ ಹೆಮ್ಮೆ ಪಡು ನೀನು
ಕಿರಿಯರಿಗೆ ನಿಮ್ಮೂರ ಸಂಪರ್ಕ ಸ್ಥಾಪಿಸು ನೀನು
ವಿದ್ಯಾದಾನಕ್ಕಿಂತ ಹಿರಿಯ ಕನಸು ಇನ್ನೇನು?
ಬಾ ಬಂಧು ಇಲ್ಲಿ ನೀ ಹಿರಿಯರನು ನಮಿಸಿ
ತನ್ನತನವನು ಅರಿಸಿ, ಪ್ರೀತಿ ಚಿಲುಮೆಯ ಪುಟಿಸಿ
ಗೆಳೆಯರನು ಒಲಿಸಿ, ಕಿರಿಯರನು ಕರೆಸಿ
ಒಗ್ಗಟ್ಟಿನಲ್ಲಿ ಒಂದು ಹೊಸದಿಶೆಯನರಿಸಿ

*ಲೇಖಕರ ಪರಿಚಯ:*

*ಡಾ. ಗುಡ್ಡೆ ರಾಘವ ಗೌಡ ಅವರ ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕು. ಅವರು ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಇಲೆಕ್ಟ್ರಿಕಲ್ ಇಂಜಿನಿಯರಿಂಗ್ ಮತ್ತು ಎಂ.ಬಿ.ಎಂ. ವಿದ್ಯಾಭ್ಯಾಸವನ್ನು ಮುಗಿಸಿ ಡೆಲ್ಲಿಯ ಕೇಬಲ್ ಕಂಪೆನಿಯೊಂದರಲ್ಲಿ ಸೇಲ್ಸ್ ಮೆನೇಜರ್ ಆಗಿ ಮತ್ತು ಕುರುಕ್ಷೇತ್ರ ವಿಶ್ವ ವಿದ್ಯಾಲಯದ ಬಿಸಿನೆಸ್ ಎಡ್ಮಿನಿಸ್ಟ್ರೇಷನ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಆ ಬಳಿಕ ಅವರು ಜೋರ್ಜಿಯ ಸ್ಟೇಟ್ ಯೂನಿವರ್ಸಿಟಿಯಿಂದ ಕಂಪ್ಯೂಟರ್ ಇನ್ಫೋರ್ಮೇಷನ್ ಸಿಸ್ಟಂಸ್ನಲ್ಲಿ ಪಿ.ಎಚ್.ಡಿ. ಡಿಗ್ರಿಯನ್ನು ಪಡೆದರು. ಈಗ ಅವರು ಯೂನಿವರ್ಸಿಟಿ ಆಫ್ ಡೇಟನಿನಲ್ಲಿ ಕಂಪ್ಯೂಟರ್ ಸೈನ್ಸ್ ವಿಭಾಗದ ಗ್ರಾಜ್ಯುವೇಟ್ ಪ್ರೋಗ್ರಾಮಿನ ಡೈರೆಕ್ಟರಾಗಿದ್ದಾರೆ.*

# ಕರಾವಳಿ ಹುಡುಗನ ಚಿಗುರಿದ ಕನಸು



ಇತ್ತೀಚಿನ ದಿನಗಳಲ್ಲಿ ಗೌಡ ಜನಾಂಗದ ಪ್ರತಿಭೆಗಳು ಎಲ್ಲಾ ಕ್ಷೇತ್ರಗಳಲ್ಲೂ ತಮ್ಮ ಛಾಪನ್ನು ಮೂಡಿಸುತ್ತಿರುವುದು ಜನಾಂಗಕ್ಕೊಂದು ಹೆಮ್ಮೆಯ ಕಿರೀಟ. ಆದರೆ ಸಿನಿಮಾರಂಗದಲ್ಲಿ ಅಲ್ಲೊಂದು ಇಲ್ಲೊಂದು ಮುಖಗಳನ್ನು ಬಿಟ್ಟರೆ ತೆರೆಯ ಮೇಲೆ ಅದೃಷ್ಟ ಪರೀಕ್ಷಿಸ ಹೊರಟವರು ಕಡಿಮೆಯೇ. ಈ ನಿರಾಸೆಗೆ ಕೊನೆ ಹಾಡಲು ಹೊರಟಿದ್ದಾನೆ ದಕ್ಷಿಣ ಕನ್ನಡದ ನಮ್ಮ ಹುಡುಗ ವಿಳಂಬ್ರ ಸೂರಜ್ ಗೌಡ.

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ವಿಳಂಬ್ರ ಕುಟುಂಬ ಹಿಂದಿನಿಂದಲೂ ರಾಜಕೀಯವಾಗಿಯೂ ಆರ್ಥಿಕವಾಗಿಯೂ ಪ್ರಸಿದ್ಧವಾದುದು. ಈ ಕುಟುಂಬದ ಪ್ರಮುಖ ರಾಜಕೀಯ ಮುಖಂಡ ನಾರಾಯಣಗೌಡ ಮತ್ತು ವಸಂತಿ ದಂಪತಿಗಳ ಕಿರಿಯ ಪುತ್ರನೇ ಸೂರಜ್. ಶಿವರಾಮ ಕಾರಂತರ "ಚಿಗುರಿದ ಕನಸು" ಕಾದಂಬರಿಯು ನಾಗಾಭರಣರ ನಿರ್ದೇಶನದಲ್ಲಿ ಚಲನಚಿತ್ರವಾಗುತ್ತಿದೆ. ಶಿವರಾಜ್‌ಕುಮಾರ್ ನಾಯಕರಾಗಿರುವ ಈ ಚಿತ್ರದ ಚಿತ್ರೀಕರಣಕ್ಕಾಗಿ ಸುಂದರ ಪ್ರದೇಶಗಳನ್ನು ಹುಡುಕುತ್ತಾ ಹೊರಟ ನಾಗಾಭರಣರ ಕಣ್ಣಿಗೆ ಬಿದ್ದ ಇವನಿಗೆ ನಟಿಸುವ ಅವಕಾಶ ದೊರಕಿಯೇ ಬಿಟ್ಟಿತು. ನಾಯಕನ ತಂಗಿಯ ಗಂಡನ ಪಾತ್ರದಲ್ಲಿ ಮುಖಕ್ಕೆ ಬಣ್ಣ ಹಚ್ಚಿದ ಈ ಹುಡುಗನಿಗೆ ಅವಕಾಶ ದೊರೆತಲ್ಲಿ ಮುಂದೆ ಕೂಡ ನಟಿಸುವ ಆಸೆಯಿದೆ.

ಸೂರಜ್‌ನ ಹಂಬಲಕ್ಕೆ ಇಡೀ ಕುಟುಂಬದ ಪೂರ್ಣ ಬೆಂಬಲವಿದೆ. ಪ್ರಸ್ತುತ ಉಜಿರೆಯ ಎಸ್.ಡಿ.ಎಮ್. ಕಾಲೇಜಿನಲ್ಲಿ ದ್ವಿತೀಯ ಪಿಯುಸಿ ವ್ಯಾಸಂಗ ಮಾಡುತ್ತಿರುವ ಈತ ಕ್ರೀಡೆಯಲ್ಲೂ ಉತ್ತಮ ನಿರ್ವಹಣೆ ತೋರಿದ್ದಾನೆ. ಈತನ ಅಣ್ಣ ಕಿಶೋರ್‌ಕುಮಾರ್ ಕೂಡ ಚಿತ್ರದ ಕಿರುಪಾತ್ರದಲ್ಲಿ ನಟಿಸಿದ್ದಾರೆ. ಅಕ್ಟೋಬರ್ ತಿಂಗಳಿನಲ್ಲಿ ತೆರೆಕಾಣಲಿರುವ ಈ ಚಿತ್ರವನ್ನು ಜನಾಂಗದ ಪ್ರತಿಯೊಬ್ಬರೂ ವೀಕ್ಷಿಸಿ ಪ್ರೋತ್ಸಾಹ ನೀಡಿ. ಅದಕ್ಕೂ ಮೊದಲು ಸಂಗಾತಿ ಮತ್ತು ಜನಾಂಗದ ಪರವಾಗಿ ಹೃದಯದಾಳದ ಆಲ್ ದಿ ಬೆಸ್ಟ್.

-ಕುದುಕುಳಿ ಕಾಂಚನ ಭರತ್, ಭಾಗಮಂಡಲ.

ಬೀಸೋದೊಣ್ಣೆ ತಪ್ಪಿಸ್ಕೊಂಡ್ರೆ ನೂರು ವರ್ಷ ಆಯುಸ್ಸು

## ಮೈಸೂರಿನಲ್ಲಿ ವಿವೇಕಾನಂದ ಇನ್‌ಸ್ಟಿಟ್ಯೂಟ್‌ನ ಶಾಖೆ ಪ್ರಾರಂಭ




ಪುಳಕಂಡ ಪ್ರದೀಪ್ ಮಾತನಾಡುತ್ತಿರುವುದು

ಭಾರತದಲ್ಲಿ ಪ್ರಥಮ ಇಂಗ್ಲೀಷ್ ತರಬೇತಿ ಸಂಸ್ಥೆ ಎಂಬ ಹೆಗ್ಗಳಿಕೆಗೆ ಪಾತ್ರವಾದ ವಿವೇಕಾನಂದ ಇನ್‌ಸ್ಟಿಟ್ಯೂಟ್ ಇದರ ಶಾಖೆಯನ್ನು ದಿನಾಂಕ 7-9-2003 ರಂದು ಮೈಸೂರಿನ ಸರಸ್ವತಿಪುರಂನಲ್ಲಿ ಪ್ರಾರಂಭಿಸಲಾಯಿತು. ಸಲಹೆಸೂಚಕರಾಗಿ ಮಡಿಕೇರಿಯಲ್ಲಿರುವ ಸರಸ್ವತಿ ವಿದ್ಯಾಸಂಸ್ಥೆ (ರಿ) ಮಡಿಕೇರಿ ಇದರ ಅಧ್ಯಕ್ಷರಾದ ಶ್ರೀ ಪುಳಕಂಡ ಕೆ. ಮುತ್ತಪ್ಪನವರ ಮಾರ್ಗದರ್ಶನದಲ್ಲಿ ನೆರವೇರಿತು.

ಕನ್ನಡ ಚಲನಚಿತ್ರ ಖ್ಯಾತ ನಟ ಮಂಡ್ಯ ರಮೇಶ್ ಉದ್ಘಾಟಿಸಿದರು ಮತ್ತು ಮಾತನಾಡಿದರು. ಸಂಸ್ಥೆಯ ಮುಖ್ಯಸ್ಥರಾದ ಶ್ರೀ ಪುಳಕಂಡ ಪ್ರದೀಪ್ ಸಂಸ್ಥೆಯನ್ನು ಕುರಿತು ಮಾತನಾಡಿದರು. ವೇದಿಕೆಯಲ್ಲಿ ಚೆರಿಯಮನೆ ನರೇಶ್ ಕುಮಾರ್, ಕೆದಂಬಾಡಿ ವಾಸುದೇವ ಮತ್ತು ಶ್ರೀಮತಿ ಪ್ರೇಮ ವಾಸುದೇವ, ಉಳುವಾರನ ಫುನಾವತಿ ಚಂದ್ರಶೇಖರ್ ಹಾಗೂ ಸುರೇಖ ಶೆಟ್ಟಿ ಇನ್ನಿತರರು ಹಾಜರಿದ್ದರು.

## ಕೊಡಗು ಜಿಲ್ಲಾ ಸರ್ಕಾರಿ ಶಾಲಾಭಿವೃದ್ಧಿ ಒಕ್ಕೂಟದ ಅಧ್ಯಕ್ಷರಾಗಿ ದಂಬೆಕೋಡಿ ಸುಬ್ರಾಯ ಹರೀಶ್ ಆಯ್ಕೆ.



ಕೊಡಗು ಜಿಲ್ಲಾ ಸರ್ಕಾರಿ ನೌಕರರ ಸಂಘದ ಕಟ್ಟಡದಲ್ಲಿ ಇತ್ತೀಚೆಗೆ ನಡೆದ ಸಭೆಯಲ್ಲಿ ಕೊಡಗು ಜಿಲ್ಲಾ ಸರ್ಕಾರಿ ಶಾಲಾಭಿವೃದ್ಧಿ ಪೋಷಕರ ಹಾಗೂ ಹಿತೈಷಿಗಳ ಒಕ್ಕೂಟ ಅಸ್ತಿತ್ವಕ್ಕೆ ಬಂದಿದ್ದು, ಇದರ ನೂತನ ಅಧ್ಯಕ್ಷರಾಗಿ ದಂಬೆಕೋಡಿ ಎಸ್. ಹರೀಶ್ ಹಾಗೂ ಪ್ರಧಾನ ಕಾರ್ಯದರ್ಶಿಯಾಗಿ ಕೂಡಂಡ ಸಾಬ ಸುಬ್ರಮಣಿ ಅವರುಗಳು ಆಯ್ಕೆಯಾಗಿದ್ದಾರೆ.

ಚೆಟ್ಟಳ್ಳಿ ಶಾಲಾಭಿವೃದ್ಧಿ ಸಮಿತಿಯ ಅಧ್ಯಕ್ಷರಾದ ಹೆಚ್. ಎಸ್. ತಿಮ್ಮಪ್ಪಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಆಯ್ಕೆ ನಡೆದಿದ್ದು, ಜಿಲ್ಲಾ ಸಂಚಾಲಕರಾಗಿ ಬೊಟ್ಟೋಳಂಡ ಮಿಟ್ಟು ಪೂಣಚ್ಚ, ಗೌರವಾಧ್ಯಕ್ಷರಾಗಿ ಹೆಚ್. ಎಸ್. ತಿಮ್ಮಪ್ಪಯ್ಯ, ಉಪಾಧ್ಯಕ್ಷರುಗಳಾಗಿ ಪ್ರಭಾಕರ್ ನೆಲ್ಲಿತ್ತಾಯ, ಕೆ. ಎಸ್. ಸುಂದರ, ಸಹ ಕಾರ್ಯದರ್ಶಿಯಾಗಿ ಗೋಪಾಲಕೃಷ್ಣ ಹಾಗೂ ಹೊನ್ನಪ್ಪ, ಕೋಶಾಧಿಕಾರಿಯಾಗಿ ಪಿ. ಟಿ. ರಮೇಶ್, ಪತ್ರಿಕಾ ವಕ್ತಾರರಾಗಿ ಪಿ. ಎಂ. ದಾಮೋದರ, ಸಲಹೆಗಾರರಾಗಿ ಬಲ್ಲಾರಂಡ ಮಣಿ ಉತ್ತಪ್ಪ ಅವರುಗಳು ಆಯ್ಕೆಯಾಗಿದ್ದಾರೆ.

ಕಾರ್ಯಕಾರಿ ಸಮಿತಿ ಸದಸ್ಯರಾಗಿ ಕೆ.ಟಿ.ಬಿದ್ದಪ್ಪ, ನಿಸ್ಸಾರ್ ಅಹ್ಮದ್, ಜಿ. ಎಂ. ಬಿದ್ದಪ್ಪ, ಮಂಜುಳ, ಸುಲೈಮಾನ್, ಬಿ. ಸಿ. ಜ್ಯೋತಿ, ಪಾಣತ್ತಲೆ ವಿಶ್ವನಾಥ್, ಗಿರೀಶ್ ತಾಳತ್‌ಮನೆ, ಬಿದ್ದಂಡ ನಂಜಪ್ಪ, ಪ್ರೇಮನಾಥ್, ಬೆಳ್ಳಿಯಪ್ಪ, ಧನಂಜಯ, ರಾಜಾರಾವ್ ಹಾಗೂ ನಾಗೇಶ್ ಅವರುಗಳು ಆಯ್ಕೆಯಾಗಿದ್ದಾರೆ. ಸಭೆಯಲ್ಲಿ ಆಶಾ ರಮೇಶ್ ರೈ ಪ್ರಾರ್ಥಿಸಿದರು. ಸುಬ್ರಮಣಿ ಸ್ವಾಗತಿಸಿ ಪ್ರಭಾಕರ್ ವಂದಿಸಿದರು. - ಸಂಗಾತಿ

## ಉದ್ಯೋಗ ವಾರ್ತೆ : ವಿವಿಧ ಸ್ಥರಗಳಲ್ಲಿ ಉದ್ಯೋಗ ಅವಕಾಶ

(ಕೃಪೆ: ವಿಜಯ ಕರ್ನಾಟಕ, ದಿನಾಂಕ 22-9-03)

1. ಕೇಂದ್ರಿಯ ವಿದ್ಯಾಲಯದಲ್ಲಿ ಅಧ್ಯಾಪಕರ ಹುದ್ದೆಗಳಿಗೆ ಅರ್ಹರಾದ ಸ್ನಾತಕೋತ್ತರ ಪದವೀಧರ, ತರಬೇತಿ ಪಡೆದ ಪದವೀಧರ ಹಾಗೂ ಪ್ರಾಥಮಿಕ ಅಧ್ಯಾಪಕ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಕೊನೆಯ ದಿನಾಂಕ 27-10-2003.
2. ಆರ್ಮಿಯಲ್ಲಿ ವೇತನ ಸಹಿ ಇಂಜಿನಿಯರಿಂಗ್ ಶಿಕ್ಷಣ, ಉದ್ಯೋಗ 10+2 PUC ಪರೀಕ್ಷೆಯಲ್ಲಿ PCM 70% ಅಂಕ ತೆಗೆದು ತೇರ್ಗಡೆ ಹೊಂದಿದ ಅವಿವಾಹಿತ ಪುರುಷರಿಂದ ಆರ್ಮಿಗೆ ಸೇರಲು ಅರ್ಜಿ ಆಹ್ವಾನಿಸಲಾಗಿದೆ.
3. ಹೈದರಾಬಾದ್ ನವೋದಯ ವಿದ್ಯಾಲಯ ವಲಯದಲ್ಲಿ ಸ್ಟಾಫ್‌ನರ್ಸ್ ಕೇಟರಿಂಗ್ ಅಸಿಸ್ಟೆಂಟ್‌ಗಳ ಹುದ್ದೆಗಳು ಖಾಲಿ ಇದೆ. ವಿದ್ಯಾರ್ಹತೆ 10+2 ಪಾಸಾಗಿರಬೇಕು. ನರ್ಸಿಂಗ್‌ನಲ್ಲಿ 2 ವರ್ಷದ ಅನುಭವಬೇಕು. ಕೊನೆಯ ದಿನಾಂಕ 6-10-2003

1. ಇಂಡಿಯನ್ ಓವರ್‌ಸೀಸ್ ಬ್ಯಾಂಕಿನಲ್ಲಿ 212 ಆಫೀಸರ್ ಹುದ್ದೆ. - ಕೊನೆಯ ದಿನಾಂಕ 6-10-2003 ಉಲ್ಲೇಖ : ವಿಜಯ ಕರ್ನಾಟಕ
2. ರೈಲ್ವೆ ಫ್ಯಾಕ್ಟರಿಯಲ್ಲಿ ಕ್ರೀಡಾಳುಗಳಿಗೆ ಉದ್ಯೋಗದ ಅವಕಾಶ. - ಕೊನೆಯ ದಿನಾಂಕ 20-10-2003 ಉಲ್ಲೇಖ : ವಿಜಯ ಕರ್ನಾಟಕ
3. ಮಿಲಿಟರಿ ಇಂಜಿನಿಯರಿಂಗ್ ಸರ್ವೀಸ್, ಸಿಲಿಗುರಿ ವಲಯದಲ್ಲಿ 66 ಕ್ಲರ್ಕ್ ಹುದ್ದೆಗಳು - ಕೊನೆಯ ದಿನಾಂಕ 8-10-2003 ಉಲ್ಲೇಖ : ವಿಜಯ ಕರ್ನಾಟಕ

# ಪತ್ರ ವಿಭಾಗ

To Kodagu Sangathi

*ಸಂಗಾತಿಗೆ ನಮಸ್ಕಾರ*

## ಜನಾಂಗದ ಹಿರಿಯರಲ್ಲಿ ಒಂದು ಮನವಿ

ಸೆಪ್ಟೆಂಬರ್ ತಿಂಗಳ ಸಂಚಿಕೆಯಲ್ಲಿ ಸೇವಾ ಧುರೀಣರಾದ ಸಂಪಾಜೆಯ ಎನ್. ಎಸ್. ದೇವಿಪ್ರಸಾದ್ ಅವರ ಬಗೆಗಿನ ಲೇಖನ ಮೆಚ್ಚುಗೆಯಾಯಿತು. ಆದರೆ ಒಕ್ಕಲಿಗರ ಕಡೆಗಿನ ಅವರ ಒಲವಿನ ಬಗ್ಗೆ ಲೇಖಕರು ವ್ಯಕ್ತ ಪಡಿಸಿದ ಅಭಿಪ್ರಾಯ ಸಮಂಜಸವಲ್ಲವೆಂದು ನನ್ನ ಅನಿಸಿಕೆ. ಒಬ್ಬ ಉತ್ತಮ, ಸಮಾಜಸೇವಕ, ಸಂಘಟಕ ಯಾವತ್ತೂ ಜಾತಿ, ಕುಲಗಳನ್ನು ಮೀರಿದವನಾಗಿರುತ್ತಾನೆ. ಹಾಗಾಗಿ ಅವನು ಸಮಾಜಕ್ಕೆ ಮಾದರಿ ವ್ಯಕ್ತಿಯಾಗಿರುತ್ತಾನೆ. ಈ ದೃಷ್ಟಿಯಿಂದ ದೇವಿ ಪ್ರಸಾದ್ ಅವರ ಒಕ್ಕಲಿಗ ಪ್ರೇಮ ಕೊಡಗಿನ ಗೌಡ ಜನಾಂಗದ ಯಾವುದೇ ವರ್ಗದವರಿಗೂ ಅಪಥ್ಯವಾಗಲಾರದು.

ಒಕ್ಕಲಿಗರು ಮತ್ತು ನಾವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ರಾಜಕೀಯ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ನಮಗೆ ಅಗತ್ಯವಿದ್ದಾಗ ಅವರ ಕಡೆ ಒಲವು ತೋರಿಸಿ, ಉಳಿದ ವಿಚಾರಗಳಲ್ಲಿ ಭಾಷೆ, ಆಚಾರವೆಂಬ ಗೋಡೆ ಕಟ್ಟುವುದು ಸರಿಯಲ್ಲ. ಒಂದು ಸಂಸ್ಕೃತಿಯೆಂಬುದು ನಿಂತ ನೀರಾಗದೇ ಹರಿಯುವ ನದಿಯಾದಾಗ ಮಾತ್ರ ಅದು ಉಳಿಯಬಲ್ಲುದು. ಈ ನಿಟ್ಟಿನಲ್ಲಿ ಇದನ್ನು ಅರಿತು ಮುನ್ನಡೆಯುತ್ತಿರುವ ಮಡಿಕೇರಿ ಮತ್ತು ಭಾಗಮಂಡಲ ಗೌಡ ಮಹಿಳಾ ಒಕ್ಕೂಟದ ಶ್ರಮ ಶ್ಲಾಘನೀಯವಾದುದು.

ಅರೆಭಾಷೆ ಮತ್ತು ತುಳು ಮಾತನಾಡುವ ಗೌಡರು ಒಕ್ಕಲಿಗರಲ್ಲವೆಂಬ ತರ್ಕವನ್ನು ಬಲವಾಗಿ ಪ್ರತಿಪಾದಿಸಿದಲ್ಲಿ ಆಗುವ ಅಪಾಯವನ್ನು ಸುಳ್ಯದ ಎಂ.ಬಿ. ಸದಾಶಿವ ಅವರ ಸೆಪ್ಟೆಂಬರ್ ಸಂಚಿಕೆಯ ಲೇಖನದಲ್ಲಿ ಮನಗಾಣಬಹುದು. ಹಾಗಾಗಿ ಒಕ್ಕಲಿಗರು ಬೇರೆ ಎನ್ನುವ ಹಿರಿಯರಲ್ಲಿ ಒಂದು ಮನವಿ. ನಿಮ್ಮ ಕಾಲದಲ್ಲಿ ನೀವು ಅಪರಿಚಿತರಂತೆ ಬದುಕಿದಿರಿ. ನಮ್ಮ ಕಾಲದಲ್ಲಿ ನಾವು ಒಂದಾಗಿ ಬಾಳಲು ಬಯಸುತ್ತೇವೆ. ಅದಕ್ಕಾಗಿ ಭದ್ರ ಅಡಿಪಾಯ ಹಾಕಿಕೊಡಿ. ಅಲ್ಲಿ ನಾವು ಕೀರ್ತಿಯ ಸೌಧ ನಿರ್ಮಿಸುತ್ತೇವೆ.

-ಕುದುಕುಳಿ ಕಾಂಚನ ಭರತ್, ಭಾಗಮಂಡಲ

ವಿ. ಸೂ. : ಜನಾಂಗದ ಬಗ್ಗೆ ಸಮಗ್ರವಾಗಿ ಚಿಂತಿಸಿ, ಅದೇ ನಿಟ್ಟಿನಲ್ಲಿ ಜನಾಂಗಕ್ಕೆ ಅರಿಯು ತಿಳಿಯು ಮೂಡಿಸುತ್ತಿದ್ದೇವೆ. ನಮಗಳಿಗೆ ನಮ್ಮದೇ ಆದ ಆಚಾರ, ವಿಚಾರ, ಪದ್ಧತಿ ಕಟ್ಟುಪಾಡುಗಳು ಮೇಲಾಗಿ ನಮ್ಮದೇ ಆದಂತಹ ಭಾಷೆ ನಡುಗನ್ನಡ (ಅರೆಗನ್ನಡ ಭಾಷೆ) ಇರುವುದು ಸತ್ಯ ಸಂಗತಿ. ನಮಗಳಿಗೆ ವಿಶಾಲ ದೃಷ್ಟಿ ಬೇಕು. ಆದರೆ ವಿಪರೀತವಲ್ಲ. ನಾವುಗಳಿಗೆ ಈ ಹಿಂದೆನೇ ಮದುವೆ ಸಂಬಂಧಗಳು ನಡೆಯುತ್ತಿತ್ತಿಲ್ಲ. ಇತ್ತೀಚೆಗೆ ಕೆಲವು ಕಡೆ ಆಗಿರಬಹುದಷ್ಟೇ. ನೆನಪಿರಲಿ. ವಿಶಾಲ ಭಾರತ ದೇಶದಲ್ಲೆಲ್ಲೂ ಗೌಡರಿಲ್ಲ. ಗೌಡರಿರುವುದು ಪಶ್ಚಿಮ ಘಟ್ಟ ಪ್ರದೇಶದಲ್ಲಿ ಮಾತ್ರ. ಅವರು Gouda/Gowda ನಾಮಾಂಕಿತರು. ಈ ಗೌಡರ ಬಗ್ಗೆ ಸಂಶೋಧನೆ ಆದಾಗ ಮಾತ್ರವೇ ನಿಜವಾದ ಗೌಡರ ಇತಿಹಾಸ ತಿಳಿಯುತ್ತದೆ. ಅಲ್ಲಿಯತನಕ ತಾಳ್ಮೆ ಇರಲಿ. -ಕುದುಕುಳಿ ಕಾಂಚನ ಭರತ್

## ಅಲ್ಲಾ ಬುದ್ಧಿ ಉಟ್ಟಾ ನಿಂಗೆ :

ಹೇಳ್ ಚಾಮವ್ವ ಹೇಳ್ ನಿಂಗೆ ಬುದ್ಧಿ ಉಟ್ಟಾ ಹೇಳ್,
ಆಟಿ ತಿಂಗಲಿ ಸತ್ತೊಳಲ್ಲಾ ಬುದ್ಧಿ ಉಟ್ಟಾ ಹೇಳ್
ಇಟ್ ದಿನ ಇದ್ದಗಡಾ ಎಂಟ್ ದಿನ ಇರಿಕ್ಕೆ ಬೊತ್ತಾ
ಹೇಳ್ ಚಾಮವ್ವ ಹೇಳ್ ನಿಂಗೆ ಬುದ್ಧಿ ಉಟ್ಟಾ ಹೇಳ್.
ಆಟಿ ತಿಂಗ ಹೋದ ಮ್ಯಾಲೆ ಹೋಕೆ ಬೊತ್ತಾ ಹೇಳ್
ಸ್ವರ್ಗದ ಬಾಗ್ಲ್ ಹಾಕೊಳೊಂತ ಗೊತ್ತಿಲ್ಲಯ ನಿಂಗೆ ಹೇಳ್
ಆಟಿ ತಿಂಗಲಿ ಸತ್ತವೆಲ್ಲಾ ನರಕಕ್ಕೆ ಹೋದವೆಗಡ ಕೇಳ್.
ಕೂಸ್ನ ಮಿಸಿ,ಕಥೆ ಹೇಳವ್ ಯಾರ್ ಚಾಮವ್ವ ಹೇಳ್.
ಮಜ್ಜಿಗೆ ಕಡ್ದ್ ಬೆಣ್ಣೆ ಕೊಡವ್ ಯಾರ್ ಚಾಮವ್ವ ಹೇಳ್
ತಲೆ ಬಾಚಿ ಜಡೆ ಹಾಕವ್ ಯಾರ್ ಚಾಮವ್ವ ಹೇಳ್.
ಬೀಟಿ ತುಂಡಂಗೆ ಇದ್ದವುಳ್‌ನೀ ಅದ್ದಂಗೆ ಸತ್ತ ಹೇಳ್
ಗೋದೆ ಕಂಬ ಇದ್ದಂಗಿದ್ದ ಅದ್ದಂಗೆ ಸತ್ತಹೇಳ್
ಹೇಳ್ ಚಾಮವ್ವಹೇಳ್ ನಿಂಗೆ ಬುದ್ಧಿ ಉಟ್ಟಾ ಹೇಳ್.
ಆಟಿ ತಿಂಗಲಿ ಸತ್ತೊಳಲ್ಲಾ ಬುದ್ಧಿ ಉಟ್ಟಾ ಹೇಳ್
ಜಿರಿಗುಟ್ಟೊ ಮಳೆಲಿ ಸತ್ತೊಳ್‌ನಿಂಗೆ ಬುದ್ಧಿ ಉಟ್ಟಾ ಹೇಳ್
ಸೌದೆ ಪೂರಾ ಚಂಡಿ ಆವುಟು ಬೆಂಕಿ ಹೊತ್ತುದಾ ಹೇಳ್
ಗುಂಡಿ ಪೂರಾ ನೀರ್ ತುಂಬಿಟ್ಟು ಹೂಣ್‌ದ್ದಂಗೆ ಹೇಳ್
ಹೇಳ್ ಚಾಮವ್ವ ಹೇಳ್ ನಿಂಗೆಬುದ್ಧಿ ಉಟ್ಟಾ ಹೇಳ್
ಬರವು ಬಾದು, ಹೋಗವು ಹೋದು ಹಂಗೆ ಚಾಮವ್ವ ಹೇಳ್
ಇಟ್ ದಿನ ಇದ್ದನೀ ನರಕಕ್ಕೆ ಹೋಬೆಡ ಚಾಮವ್ವ
ಎಂಟ್ ದಿನ ಇದ್ದ್ ನೀ ಸ್ವರ್ಗಕ್ಕೆ ಹೋಗು ಚಾಮವ್ವ
ಹೇಳ್ ಚಾಮವ್ವ ಹೇಳ್ ನಿಂಗೆ ಬುದ್ಧಿ ಉಟ್ಟಾ ಹೇಳ್
ಆಟಿ ತಿಂಗಲಿ ಸತ್ತೊಳಲ್ಲಾ ಬುದ್ಧಿ ಉಟ್ಟಾ ಹೇಳ್

*-ಚಾರಿಯಂಡ ಆರ್. ಜೋಯಪ್ಪ, ಮುಖ್ಯೋಪಾಧ್ಯಯರು, ಮದೆ ಮಹದೇಶ್ವರ ಪ್ರೌಢಶಾಲೆ, ಮದೆನಾಡ್.*

## ॥ ನಿನ್ನಡಿಗೆ ಶರಣು ॥

ನಿನ್ನಡಿಗೆ ಶರಣಾಗಿ । ನಾನೇನೂ ಬಯಸುವೆನು।
ಎನ್ನ ಬಯಕೆಯ ನೀನು ।ಪೂರೈಸುತಾಯೆ।
ನಿನ್ನ ಜ್ಞಾನದ ಹೊನಲು । ನಮ್ಮ ಮನದಲಿ ಇತ್ತು
ನಮ್ಮ ಗೌಡ ಜನರಾಶೆಯನು । ಈಡೇರಿಸುತಾಯೆ॥
ಮತಿಹೀನರಿಹರೆಂದು । ಮಮತೆಯಲ್ಲಿ ನೀನಿಂದು
ಮತಿವಂತನಾಗಿಂದು। ಮಾಡವರತಾಯೆ।
ನಿನ್ನ ದಿವ್ಯಾಕಿರಣ।ಎಮ್ಮ ಕಣ್ಣನು ತೆರೆಸಿ
ಉನ್ನತದ ಸನ್ಮಾರ್ಗ ತೋರೆಮಗೆ ತಾಯೆ॥
ಮನದೊಳಗೆ ಮುಸುಕಿರುವ । ಮಬ್ಬನ್ನು ನೀ ಬಿಡಿಸಿ।
ತಬ್ಬುರಿಸಿನಡೆವೆಮಗೆ। ಮುಕ್ತಿ ಕೊಡುತಾಯೆ।
ನೀನೆ ಸರಸ್ವತಿ ನೀನೆ। ವಿದ್ಯಾದೇವಿಯು ನೀನೆ
ನೀನೆ ಸರ್ವಸ್ವವೂ। ಮಹಾ ಮಹಿಮಾಮಾಯೆ॥
ಕ್ಷಮಿಸು, ಕ್ಷಮಿಸುತಾಯೆ।ಕಳಂಕವಿರೆ ನಮ್ಮಲ್ಲಿ
ಅಕಳಂಕರಾಗೆಮ್ಮ।ಮಾಡೆಮಗೆ ತಾಯೆ।
ನೀನೊಲಿಯದಿರೆ ಎನ್ನ।ಬಯಕೆಯೆಲ್ಲವೂ ಶೂನ್ಯ।
ನೀನೆಗತಿ ನಾ ನಿನಗೆ ।ಶರಣು ತಾಯೆ॥

-ಹೊದ್ದೆಟ್ಟಿ ಭವಾನಿಶಂಕರ,ಬೆಂಗಳೂರು.

ಊದುಕಡ್ಡಿ ಹತ್ತಿಸ್ಕೊಂಡು ಬಾ ಅಂದ್ರೆ ಊರೂರೇ ಹತ್ತಿಸಿದ್ನಂತೆ

# ತಿಂಗಳುಗಳ ಹೆಸರು ಹೇಗೆ ಬಂತು ಗೊತ್ತೆ ?

ಯಾವುದೇ ಕೆಲಸಕ್ಕೂ ದಿನ ನಿಗದಿಪಡಿಸಲಾಗುತ್ತದೆ. ಆಗ ಯಾವ ತಿಂಗಳಿನ ದಿನ ಎಂದು ನಮೂದಿಸಿ ದಾಖಲೆಗಳಲ್ಲಿ ಬರೆದಿಡಬೇಕಾಗುತ್ತದೆ.

ಅಂದರೆ ತಿಂಗಳುಗಳಿಗೆ ಈ ನಾಮಸ್ವರೂಪ ಹೇಗೆ ಬಂತು ಎಂಬ ವಿಚಾರವನ್ನು ಕೆಲ ತಜ್ಞರು ಬಹಳ ಹಿಂದೆಯೇ ಶೋಧಿಸಿದ್ದಾರೆ.

ಮನುಷ್ಯ ಆದಿಮಾನವನಿಂದ ವಿಕಾಸ ಹೊಂದುತ್ತಾ ಕ್ರಮೇಣ ತನ್ನದೇ ಆದ ನಿರ್ದಿಷ್ಟ ಸದಸ್ಯರೊಂದಿಗೆ ವಾಸಿಸ ಹತ್ತಿದ. ಆಗ ತನ್ನ ಕೆಲಸ ಕಾರ್ಯಗಳನ್ನು ಪ್ರತಿನಿತ್ಯ ಬದಲಾಯಿಸುತ್ತ ಹೋದಂತೆ ನೆನಪಿಡಲು ಕಷ್ಟವಾದಾಗ ದಿನಗಳಿಗೆ ಹೆಸರಿಟ್ಟು, ನಂತರ ಋತುಮಾನಕ್ಕನುಗುಣವಾಗಿ ಮಾಸಗಳ ಹೆಸರನ್ನು ಇಟ್ಟ.

ಈಗಿನ ಎಲ್ಲಾ ತಿಂಗಳುಗಳ ಹೆಸರು ವಿಶ್ವದ ಅನೇಕ ರಾಷ್ಟ್ರಗಳ ಜನಾಂಗದ ಕೊಡುಗೆಗಳಾದರೂ ಹೆಚ್ಚಿನವು ರೋಮನ್ ಮೂಲದಿಂದ ಬಂದಂಥವು.

*ಜನವರಿ:* ರೋಮನ್‌ರ ದೇವ 'ಜೀನಸ್'ನಿಗೆ 2 ಮುಖ. ಒಂದು ಭೂತಕಾಲದಲ್ಲಿ ಸಂಭವಿಸಿದ ಘಟನಾವಳಿಗಳತ್ತ ನೋಡುತ್ತಿದೆ ಎಂಬುದು ಅಲ್ಲಿನ ಜನರ ನಂಬಿಕೆಯಾಗಿತ್ತು. ಆದರಿಂದಲೇ ವರ್ಷದ ಮೊದಲ ತಿಂಗಳು ಜನವರಿ ಎಂದು ರೂಢಿಸಿಕೊಂಡು ಬರಲಾಗಿದೆಯಂತೆ.

*ಫೆಬ್ರವರಿ:* ರೋಮ್ ಸಂಸ್ಕೃತಿಯ ಜನಾಂಗದ ರೋಮನ್‌ರು ಆಚರಿಸುವ 'ಫೆಬ್ರುವಾ' ಎಂಬ ಹಬ್ಬದ ಹೆಸರಿನಿಂದಾಚರಿಸುವರು. ಅಂದರೆ ಜನವರಿ ತಿಂಗಳಿನ ನಂತರ ಈ ಹಬ್ಬ ಆಚರಿಸುತ್ತಿದ್ದರಿಂದ ಈ ಹೆಸರು ಬಂತು.

*ಮಾರ್ಚ್:* ರೋಮನ್‌ರು ಅನೇಕರೊಡನೆ ಯುದ್ಧ ಮಾಡುತ್ತಿದ್ದಾಗ ತಮ್ಮ ಯುದ್ಧ ದೇವತೆ 'ಮಾರ್ಸ್'ಗಳಿಗೆ ಪೂಜಿಸುತ್ತಿದ್ದರು. ಅದೇ ಈಗಿನ ಮಾರ್ಚ್ ತಿಂಗಳು.

*ಏಪ್ರಿಲ್ :* ಏಪ್ರಿಲ್ ತಿಂಗಳೆಂದರೆ ಯಾರಿಗೆ ತಾನೇ ನಗು ಬರುವುದಿಲ್ಲ. ಯಾಕೆಂದರೆ ಈ ತಿಂಗಳ ಮೊದಲ ದಿನದಿಂದ ಕೊನೆಯ ದಿನದವರೆಗೆ ವಿಶ್ವದ ಎಲ್ಲೆಡೆ ಮೂರ್ಖರ ದಿನ ಆಚರಿಸುತ್ತಾರೆ. ಬಹುತೇಕ ಎಲ್ಲರೂ ಮೂರ್ಖರ ದಿನದಂದು ಮೂರ್ಖರಾದವರೇ,

ವಸಂತ ಋತುವಿನ ಆರಂಭದ ದಿನಗಳಲ್ಲಿ ಗಿಡ, ಮರ ಚಿಗುರಿ ಪ್ರಕೃತಿಗೆ ಹರೆಯದ ಆರಂಭವಾಗುತ್ತದೆ. ಲ್ಯಾಟಿನ್ ಭಾಷೆಯಲ್ಲಿ 'ಎಪಿರಲ್' ಎಂದರೆ ಆರಂಭ ಎಂದರ್ಥ. ಇದೇ ಈಗಿನ ಏಪ್ರಿಲ್ ತಿಂಗಳಾಗಿದೆ.

*ಮೇ:* ದೈವಿ ಭಕ್ತಿಯಲ್ಲಿ ಅಪಾರ ನಂಬಿಕೆಯನ್ನಿಟ್ಟ ರೋಮನ್‌ರು ತಮ್ಮ ದೇವತೆಯ ಹೆಸರಿನಿಂದ ಈ ತಿಂಗಳನ್ನು ಕರೆಯುತ್ತಿದ್ದರು. ಆ ದೇವತೆಯೇ 'ಮೈವಾ' ಅವಳ ಹೆಸರಿನಿಂದ ಈ ತಿಂಗಳಿಗೆ ಹೆಸರು ಬಂದಿದೆ.

*ಜೂನ್:* ಸ್ವರ್ಗದ ಅಧಿಪತಿ ದೇವತೆ ಎಂದು ನಂಬಲಾಗಿರುವ 'ಜೂನೋ'ಳ ಹೆಸರಿನಲ್ಲಿ ಈ ತಿಂಗಳನ್ನು ಕರೆಯುತ್ತ ರೂಢಿಸಿಕೊಳ್ಳಲಾಗಿದೆ.

*ಜುಲೈ:* ಜಗತ್ತಿಗೆ ಮೊತ್ತ ಮೊದಲ ಕ್ಯಾಲೆಂಡರನ್ನು ಪರಿಚಯಿಸಿದ 'ಜೂಲಿಯಸ್ ಸೀಸರ್' ಹೆಸರಿನಿಂದ ಈ ತಿಂಗಳನ್ನು ಕರೆಯಲಾಗುತ್ತಿದೆ. ಅವನು ಇದೇ ತಿಂಗಳಿನಲ್ಲಿ ಜನಿಸಿದ್ದ.

*ಆಗಸ್ಟ್:* ಯುದ್ಧ ಪ್ರೇಮಿ ದೊರೆ 'ಆಗಸ್ಟಸ್' ಅನೇಕ ಯುದ್ಧಗಳನ್ನು ಇದೇ ತಿಂಗಳಿನಲ್ಲಿ ದಂಡೆತ್ತಿ ಹೋಗಿ ಗೆಲ್ಲುತ್ತಿದ್ದ. ಆದ್ದರಿಂದ ಈ ದಿನಗಳಿಗೆ ಆಗಸ್ಟ್ ಎಂಬ ಹೆಸರಾಗಿದೆ.

*ಸೆಪ್ಟಂಬರ್:* ರೋಮನ್‌ರು ಪ್ರಥಮ ಬಾರಿಗೆ ತಯಾರಿಸಿದ ಕ್ಯಾಲೆಂಡರ್‌ನಲ್ಲಿ ಈ ತಿಂಗಳಿಗೆ 7 ನೇ ಸ್ಥಾನ ಕಲ್ಪಿಸಲಾಗಿದೆ. ಇದು ಲ್ಯಾಟಿನ್ ಭಾಷೆಯ 'ಸೆಪ್ಟಂ' ಎಂಬುದರಿಂದ ಬಂದಿದೆ. ಹೀಗೆಂದರೆ ಏಳು ಎಂದರ್ಥ.

*ಅಕ್ಟೋಬರ್:* ಇದು ರೋಮನ್‌ರ ಕ್ಯಾಲೆಂಡರ್‌ನಲ್ಲಿ 8 ನೇ ತಿಂಗಳಾಗಿತ್ತಂತೆ. ರೋಮನ್ ಭಾಷೆಯಲ್ಲಿ ಎಂಟು ಎನ್ನಲು 'ಆಕ್ಟೋ' ಎಂದು ಕರೆಯುತ್ತಾರೆ. ಅದಕ್ಕೆ ಈ ತಿಂಗಳಿಗೆ ಈ ಹೆಸರು.

*ನವೆಂಬರ್:* ರೋಮನ್‌ರ ಕ್ಯಾಲೆಂಡರ್‌ನಲ್ಲಿ ಇದು ಒಂಬತ್ತನೇ ತಿಂಗಳಾಗಿತ್ತು. ಲ್ಯಾಟಿನ್ ಭಾಷೆಯಲ್ಲಿ 'ನವೆಂ' ಎಂದರೆ ಒಂಬತ್ತು ಎಂದರ್ಥ.

*ಡಿಸೆಂಬರ್:* ಇದು ಕೂಡ ರೋಮನ್‌ರ ಕೊಡುಗೆ. ಅವರ ಹಳೆ ಕ್ಯಾಲೆಂಡರ್‌ನಲ್ಲಿ ಇದು ಹತ್ತನೇ ತಿಂಗಳಾಗಿತ್ತು. ಕಾರಣ ಇವುಗಳನ್ನು ನವೀಕರಣಗೊಂಡ ಕ್ಯಾಲೆಂಡರ್‌ನಲ್ಲಿ ಹಾಗೆಯೇ ಉಳಿಸಿಕೊಳ್ಳಲಾಗಿದೆ. ಲ್ಯಾಟಿನ್ ಭಾಷೆಯಲ್ಲಿ 'ಡಿಸೆಂ' ಎಂದರೆ ಹತ್ತು ಎಂದರ್ಥ.

ಗೊತ್ತಾಯಿತಲ್ಲಾ ನಾವು ಬಳಸುವ ತಿಂಗಳಿಗೆ ಹೆಸರು ಹೇಗೆ ಬಂತೆಂಬ ವಿಷಯ, ಇನ್ನು ಭಾರತೀಯರು ತಿಂಗಳನ್ನು ಮಾಸಗಳಾಗಿ ಸಂಸ್ಕೃತ ಭಾಷೆಯಲ್ಲಿ ಹೆಸರಿಸಿಕೊಂಡಿದ್ದರೂ ವಿಶ್ವದೆಲ್ಲೆಡೆ ಬಳಸುವಂತೆ ಈ ಮೇಲಿನ ತಿಂಗಳ ಹೆಸರನ್ನೇ ಕರೆಯುತ್ತಾರೆ.

**- ಕೋಳುಮುಡಿಯನ ನೂತನ್, ಗಾಳಿಬೀಡು.**

## ಬೆರಳಚ್ಚು ಯಂತ್ರ ಬಂದಿದ್ದು ಹೀಗೆ..........

ಕೈ ಬರಹದ ಅಕ್ಷರಗಳು ಸುಂದರವಾಗಿ, ತಪ್ಪಾಗದಂತೆ, ವೇಗವಾಗಿ ಬರೆಯುವವರು ಬಹು ವಿರಳ. ಬೆರಳಚ್ಚು ಯಂತ್ರ (ಟೈಪರೈಟರ್)ದಲ್ಲಿ ವೇಗವಾಗಿ ಸುಂದರವಾದ ಅಕ್ಷರಗಳನ್ನು ಕಾಗದಗಳಲ್ಲಿ ಮುದ್ರಿಸಬಹುದು.

ಈ ಟೈಪರೈಟರ್‌ನ್ನು ಯಾವಾಗ ತಯಾರಿಸಲಾಯಿತು ಎಂದು ಅರಿಯುವುದು ಅವಶ್ಯ. ಮೊಟ್ಟಮೊದಲಿಗೆ ಫ್ರಾನ್ಸ್ ದೇಶದ ಕುರುಡು ವಿದ್ಯಾರ್ಥಿಗಳಿಗೆ ಕಲಿಕೆಗಾಗಿ 1784 ರಲ್ಲಿ ಉಬ್ಬಿದ ಅಕ್ಷರಗಳಿರುವ ಯಂತ್ರದ ಮಾದರಿಯೊಂದನ್ನು ತಯಾರಿಸಲಾಯಿತು. ಇದೇ ಮುಂದೆ ಟೈಪರೈಟರ್‌ನ ರೂಪ ಪಡೆದುಕೊಂಡಿತು.

1829 ನೇ ಇಸ್ವಿಯಲ್ಲಿ ಟೈಪೋಗ್ರಾಫರ್ಸ್ ಎಂಬ

18 ನೇ ಪುಟಕ್ಕೆ

# ದಂತ ಮತ್ತು ಬಾಯಿಯ ಬಗ್ಗೆ

***ಬಾಯಿಯ ಕ್ಯಾನ್ಸರ್ (ಅರ್ಬುದ ರೋಗ)***

***ಕಾರಣಗಳು :*** ಬಾಯಿಯ ಕ್ಯಾನ್ಸರ್ ಇತರ ಭಾಗಗಳಲ್ಲಿ ಆಗುವ ಕ್ಯಾನ್ಸರ್ ಕಾಯಿಲೆಯಷ್ಟೇ ಪರಿಣಾಮಕಾರಿಯಾಗಿರುತ್ತದೆ.

ಕಾಯಿಲೆಯನ್ನು ಸೂಕ್ತ ಸಮಯದಲ್ಲಿ ಚಿಕಿತ್ಸೆ ಮಾಡದಿದ್ದಲ್ಲಿ ಜೀವಕ್ಕೆ ಅಪಾಯ. ಸಾಮಾನ್ಯವಾಗಿ ಗಂಡಸರಲ್ಲಿ ಹೆಚ್ಚಾಗಿ ಮತ್ತು ಮಹಿಳೆಯರಲ್ಲೂ ಕಂಡು ಬರುತ್ತದೆ.(70:30)

ಗುಟ್ಕಾ, ತಂಬಾಕು (ಹೊಗೆಸೊಪ್ಪು) ಧೂಮಪಾನ, ವಿಪರೀತ ಕುಡಿತ ಇವುಗಳು ಕಾಯಿಲೆಯ ಮೂಲ ಕಾರಣಗಳು.

***ರೋಗದ ಲಕ್ಷಣಗಳು :*** ಬಾಯಿಯ ಒಳಗಡೆ ಅಥವಾ ತುಟಿಯ ಭಾಗದಲ್ಲಿ ಚರ್ಮವು ಬಿಳಿ ಅಥವಾ ಕೆಂಪಗಿನ ಬಣ್ಣಕ್ಕೆ ಬಂದಲ್ಲಿ (White or Red Patch) ಅಥವಾ ವಾಸಿಯಾಗದೆ ಇನ್ನೂ ಮುಂದುವರಿದಲ್ಲಿ

ಬಾಯಿಯ ಹುಣ್ಣು (Ulser) ನೋವನ್ನು ಕೊಡದೆ, ಎರಡು ವಾರಕ್ಕಿಂತ (More then 2 weeks) ಹೆಚ್ಚು ಮುಂದುವರಿದಲ್ಲಿ ತಿನ್ನಲು, ಕುಡಿಯಲು, ಮಾತನಾಡಲು ಕಷ್ಟವಾಗುತ್ತಿದ್ದಲ್ಲಿ, ರೋಗದ ಲಕ್ಷಣಗಳನ್ನು ಅತಿ ಬೇಗನೆ ಕಂಡು ಹಿಡಿಯಬಹುದು.

ಈ ಮೇಲೆ ತಿಳಿಸಿದಂತೆ ವ್ಯಕ್ತಿಯು ತೊಂದರೆ ಅನುಭವಿಸುತ್ತಿದ್ದರೆ, ಕೂಡಲೆ ದಂತ ವೈದ್ಯರನ್ನು ಭೇಟಿ ಮಾಡಿ ಸೂಕ್ತ ಸಲಹೆಗಳನ್ನು ಪಡೆಯಿರಿ.

***ರೋಗವನ್ನು ಯಾವ ರೀತಿ ದೂರವಿಡಬಹುದು?***

ನಾವು ತಿನ್ನುವ ಆಹಾರದಲ್ಲಿ ಒಳ್ಳೆಯ ಪೌಷ್ಟಿಕಾಂಶವಿದ್ದು, ಹಣ್ಣು, ತರಕಾರಿಗಳು (ನಾರಿನ ಅಂಶವಿರುವ) ಅಥವಾ ಮೀನು, ಹಾಲು ಇವುಗಳು ನಿಮ್ಮ ಆಹಾರದಲ್ಲಿ ಸೇರಿರಲಿ. ದಿನಕ್ಕೆರಡು ಸಲ ಹಲ್ಲು ಶುಚಿಗೊಳಿಸಿ, ಬಾಯಿಯ ಶುಚಿತ್ವವನ್ನು ಕಾಪಾಡಿಕೊಳ್ಳಬೇಕು. ಕೆಟ್ಟ ಅಭ್ಯಾಸಗಳನ್ನು ದೂರವಿಡಿ. ನಿಮಗೇನಾದರು ರೋಗದ ಲಕ್ಷಣಗಳು ಕಂಡು ಬಂದಲ್ಲಿ ವೈದ್ಯರನ್ನು ಭೇಟಿ ಮಾಡಿ

ಇತ್ತೀಚಿನ ದಿನಗಳಲ್ಲಿ ಅದೂ ಹದಿಹರೆಯದವರಲ್ಲಿ ಕಂಡು ಬರುತ್ತದೆ. ಇವರು ದಿನ ನಿತ್ಯ ಗುಟ್ಕಾವನ್ನು ತುಟಿಯ ಒಳಭಾಗದಲ್ಲಿ (ವಸಡು ಮತ್ತು ತುಟಿಯ ಸೇರುವ ಜಾಗದಲ್ಲಿ) ಇಡುವುದೆನ್ನು ಸಾಮಾನ್ಯವಾಗಿ ಕಾಣಬಹುದು. ಇದರಿಂದಾಗಿ ತುಟಿಯ ಒಳಭಾಗವು ಬೆಂದು (ಸುಟ್ಟ) ಹೋದಂತಾಗಿ ಅಲ್ಲಿ ಸಣ್ಣ ರೀತಿಯ ಅಲ್ಸರ್ ಆಗುತ್ತದೆ. ಇದು ದಿನ ನಿತ್ಯ ಮುಂದುವರಿಯುತ್ತಾ ಹೋದಲ್ಲಿ ದೊಡ್ಡ ಪ್ರಮಾಣದಲ್ಲಿ ಅಲ್ಸರ್ ಉಂಟಾಗಿ ಕ್ಯಾನ್ಸರ್‌ಗೆ ತಿರುಗುವ ಲಕ್ಷಣಗಳು ಹೆಚ್ಚು.

ಇನ್ನು ಕೆಲವರು ಬಾಯಿ ವಾಸನೆ ಹೋಗಲಾಡಿಸಲೆಂದು ಪ್ರಾರಂಭದಲ್ಲಿ ಗುಟ್ಕಾ ಜಗಿದವರು ಅದರ ದಾಸನಾಗಿ ಬಿಡುತ್ತಾರೆ. ಇದನ್ನು ಸೇವಿಸಿದ ಮೇಲೆ ನಿಮ್ಮ ಆರೋಗ್ಯವೂ ಕೆಡುತ್ತದೆ. ಬಾಯಿಯ ವಾಸನೆಯೂ ಹೆಚ್ಚಾಗುತ್ತಾ ಹೋಗುತ್ತದೆ. ಹಲ್ಲು ಮತ್ತು ವಸಡಿನ ಸಂದಿಗಳಲ್ಲಿ ಸೇರಿಕೊಂಡು ಕೊಳೆಯಲು ಪ್ರಾರಂಭ ಮಾಡುತ್ತದೆ. ನಿಮ್ಮ ಕಾಯಿಲೆ ವಾಸಿಯಾಗುವ ಬದಲು ಹೆಚ್ಚಾಗುತ್ತಾ ಹೋಗುತ್ತದೆ. ಹೊಟ್ಟೆಗೆ ಊಟ ಸೇರದಿರುವುದು, ಹೊಟ್ಟೆ ಉಬ್ಬಿದಂತಾಗುವುದು (Gastrik) ಮತ್ತು ವಾಂತಿಯಾಗಬಹುದು.

ಎಲೆ ಅಡಿಕೆ ಹೆಚ್ಚಾಗಿ ತಿನ್ನುವವರು ಮತ್ತು ಬಿಡಲು ಸಾಧ್ಯವೇ ಇಲ್ಲ ಎಂದಾದರೆ, ತಂಬಾಕು (ಹೊಗೆ ಸೊಪ್ಪು) ಮತ್ತು ಸುಣ್ಣವನ್ನು ಬಿಟ್ಟು ಬರಿ ಅಡಿಕೆ ಮತ್ತು ಎಲೆಯನ್ನು ಜಗಿಯಿರಿ.

ರೋಗದ ಲಕ್ಷಣಗಳು ಬಂದಲ್ಲಿ ಚಿಕಿತ್ಸೆಯು ತುಂಬಾ ತ್ರಾಸದಾಯಕವಾಗಿರುತ್ತದೆ. ಆ ಭಾಗದ ಜಾಗವನ್ನು (Effected Lesion) ಕತ್ತರಿಸಿ ತೆಗೆಯಬೇಕಾಗುತ್ತದೆ. ಬೇಕಾದಲ್ಲಿ ಕ್ಷ-ಕಿರಣ (Radio Therapy) ವನ್ನು ಹಾಯಿಸಿ ರೋಗವು ಇನ್ನಷ್ಟು ಮುಂದುವರಿಯದಂತೆ ತಡೆ ಹಿಡಿಯಬಹುದು. ಇವೆಲ್ಲವೂ ತುಂಬಾ ನಿಧಾನವಾಗಿ ಮತ್ತು ಕೆಲವು ತಿಂಗಳುಗಳು ಬೇಕಾಗುತ್ತವೆ. ಹೆಚ್ಚಾಗಿ ರೋಗವು ಪೂರ್ತಿಯಾಗಿ ಕಮ್ಮಿಯಾಗುವುದಿಲ್ಲ. ಹಲವು ಬಾರಿ ಶಸ್ತ್ರ ಚಿಕಿತ್ಸೆಯನ್ನು ಮಾಡಿದಾಗ ಆ ಭಾಗದ ಮೂಳೆ (Bone) ಮತ್ತು ಮಾಂಸಖಂಡಗಳನ್ನು ತೆಗೆಯಬೇಕಾಗುತ್ತದೆ. ಮಾಡದೇ ಇದ್ದ ಪಕ್ಷದಲ್ಲಿ ರೋಗಿಯ ಕ್ಯಾನ್ಸರ್ ಉಲ್ಬಣಗೊಂಡು ಸಾವು ನಿಶ್ಚಿತವಾಗುತ್ತದೆ.

ಇದರಿಂದಾಗಿ ರೋಗಿಯ ಮುಖದ ಭಾಗಗಳ ಲಕ್ಷಣಗಳೇ ಹೊರಟು ಹೋಗಬಹುದು. ರೋಗವು ಬರುವುದಕ್ಕೆ ಮುಂಚೆ ತಡೆ ಹಿಡಿದರೆ ಮತ್ತು ಕೆಟ್ಟ ಅಭ್ಯಾಸಗಳಿಂದ ದೂರವಿದ್ದರೆ ಉತ್ತಮವಲ್ಲವೆ?

ಡಾ. ರತೀಶ್ ಬಿಳಿಮಲೆ, ಮಡಿಕೇರಿ,

(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುವುದು)

**ವಿ. ಸೂ. ಅಭ್ಯಾಸವಿದ್ದಲ್ಲಿ ಬಿಡುವುದು ಲೇಸು, ಸಂಗಾತಿ.**

---

## ಗಂಟೆ ಎಷ್ಟ್‌ನೆ ?

ಅಪ್ಪ : ಕೆಲಸಕ್ಕೆ ಹೊತ್ತಾತ್, ಬೆಳಗಾದ್ ಗೊತ್ತಾತ್‌ಲೆ? ಎಷ್ಟು ಹೊತ್ತಾತ್ತೇನೋ, ಮಣ್ಣ ನ ಕರ್‌ದದೆ.

ಮಣ್ಣ : ಎಂತ ಅಪ್ಪ?

ಅಪ್ಪ : ನೋಡುನೆ ಗಂಟೆ ಎಸ್ಟಾತ್‌ತ?

ಮಣ್ಣ : ನಂಗೆ ಗೊತ್ತಿಲ್ಲೆ ಅಪ್ಪ.

ಅಪ್ಪ : ಸಣ್ಣ ಮುಳ್ಳು ಮತ್ತೆ ದೊಡ್ಡ ಮುಳ್ಳು ಎಲ್ಲಿ ಉಟ್ಟುತಾರ್ ಹೇಳ್.

ಮಣ್ಣ : ಅಪ್ಪ, ಸಣ್ಣ ಮುಳ್ಳುದೊಡ್ಡ ಮುಳ್ಳೇರಡ್ ಗಡಿಯಾರದ ಒಳ್ಳೆ ಉಟ್ಟುತ.

ಓಡೆಪ್ಪನ ಮಾಲ ಸುರೇಶ್, ಸುಂಟಿಕೊಪ್ಪ.

*ಬಾಲ ಸಂಗಾತಿ ವಿಭಾಗ : ಕಥೆ -15*

*ಕಳ್ದ ಸಂಚಿಕೆಂದ ಮುಂದ್‌ವರ್ದದೆ*

## ನೀನ್ ಹಾಂಗಿದ್ದರೆ ನಾನೂ ಹಿಂಗೇ

ಒಂದೂ ಊರ್‌ಲಿ ಒಬ್ಬ ತಾಯಿಗೆ ಆರ್ ಜನ ಮಕ್ಕ ಇದ್ದವೆ. ಅವರಲ್ಲಿ ದೊಡ್ಡ ಮಗಳಿಗೆ ಮದುವೆ ಆಗಿದ್ದದೆ. ಇನ್ನ್ ಮೂರ್‌ಗಂಡ್ ಮಕ್ಕ ಕೊನೆಗೆ ಎರಡ್ ಹೆಣ್ಣ್ ಮಕ್ಕ ಸಣ್ಣವು. ಬಾವ ಆಗಾಗ ಬಂದ್ ಅಪ್ಪ ಇಲ್ಲದ ಮಕ್ಕಳ ಮತ್ತೆ ಅತ್ತೆನ ನೋಡಿಕಂಡ್ ಹೋಗ್‌ತಿದ್ದದೆ. ಒಂದ್ ದಿನ ಬಾವ ಬಾಕಾಕೆನ ಒಂದು ಬ್ಯಾಗ್‌ಲಿ ಸಕ್ಕರೆನೂ ಮತ್ತೆ ಮರ್ಕಿನ್ ಹೊಡಿನೂ ತಂದದೆ. ಬಾವ ಯಾಗೋಳು ಬಾಕಾಕನ ಮಿಠಾಯಿ ತಂದ್ ಅಭ್ಯಾಸ. ಮಕ್ಕ ಬ್ಯಾಗ್‌ನ ತೆಗ್ದ್ ಈ ವಸ್ತುಗಳ್ನ ನೋಡಿ ಮುಖ ಮುಖ ನೋಡಿಕಂಡ್ ನೆಗಾಡಿಕಂಡವೆ. ಅತ್ತೆಗೂ ನೆಗೆ ಬಂದರೂ ತಡ್‌ಕಂಡ್ ಅಳಿಯಂದಿರೆ ನೀವು ತಪ್ಪು ತಿಳಿಯದಿದ್ದರೆ ಒಂದು ಪ್ರಶ್ನೆತ ಕೇಳ್ದೆ. ಅಯ್ಯೋ ಕೇಳಿ ಅತ್ತೆ ಅದ್‌ಕ್ಕೇನ್‌ತ ಅಳಿಯ ಹೇಳ್ದೆ. ಯಾಕೆ ಈ ಸಾಮಾನ್‌ಗತ ಕೇಳ್ದೆ ಅತ್ತೆ. ಓಹೋ ಅದಾತ ನೆಗಾಡಿಕಂಡ್ ಅಳಿಯ ಹೇಳ್ದೆ. ನಾನ್ ಯಾಗೋಳು ಬಾಕಾಕನ ತಂದ ಸಿಹಿತಿಂಡಿಗೆ ನಿಮ್ಮಲ್ಲಿ ಯಾರಿಗಾದರ್ ಒಬ್ಬಂಗೆ ಇಷ್ಟ ಆದುಲೆ. ಅದ್‌ಕೆ ಈ ಸಾಮಾನ್ ತಕಂಡ್ ಬಂದೆ. ಯಾರ್‍ಯಾರಿಗೆ ಏನೇನ್ ಇಷ್ಟನೋ ಅದನ್ನೆ ಮಾಡಿಕಂಡ್ ತಿನ್ನಲಿತ್ತ ಹೇಳಿಬುಟ್ ಕೊಂಕ್ ನಗೆ ಆಡ್ದೆ. ಮಕ್ಕಳ ಜೊತೆಲಿ ಅತ್ತೆನೂ ಪೆಚ್ಚಾದವೆ.

ಬೆಳಿಗೆ ಎದ್ದ್ ಅಳಿಯ ಹೊರಡ್‌ಕಾಕ್‌ನ ಅತ್ತೆ ಒಂದು ಮೂಟೆ ಹತ್ತಿನೂ, ಸೂಜಿನೂ ತಂದ್ ಮಡ್‌ಗಿದೆ. ಅಳಿಯಂಗೆ ಪರಮಾಶ್ಚರ್ಯ ಆತ್. ಹಂಗೇ ಅತ್ತೇನೆ ಕೇಳ್ದೆ. ಇದೆಲ್ಲಾ ನಂಗ್ಯಾಕೆ ಅತ್ತೆತ,. ಆಗ ಅತ್ತೆ ಹೇಳ್ದೆ, ಪ್ರತಿ ಸಲ ನಾನ್ ಬಟ್ಟೆ ಕೊಡ್‌ಕಾಕನ ನಿಮಿಗಾಗಲಿ, ಮಗಳಿಗಾಗಲಿ ಇಲ್ಲೆ ಮಕ್ಕಳಿಗಾಗಲಿ ಯಾರಾದರ್ ಒಬ್ಬರಿಗೆ ಇಷ್ಟ ಆದುಲೆಲಾ ಅದ್‌ಕೆ. ಈ ಸಲ ಹತ್ತಿ ಕೊಟ್ಟೆ. ನೀವೆ ನೂಲ್ ತೆಗ್ದ್ ಬಟ್ಟೆ ಹೊಲ್ಕಣಿತೇಳಿ ನೆಗೆ ಆಡ್ದೆ. ಈಗ ಪೆಚ್ಚಾಗುವ ಸರದಿ ಅಳಿಯಂದ್, ಪಾಪ ತುಟಿ ಪಿಟಿಕ್ ಹೇಳದೆ ಹತ್ತಿ ಮೂಟೆನ ತಕಂಡ್ ತನ್ನ ಊರಿಗೆ ಹೋದೆ. ನೀ ಹಾಂಗಿದ್ದರೆ ನಾನು ಹೀಂಗೇ ತೇಳಿಕಂಡ ಅತ್ತೆ ಮನೆ ಒಳಗೆ ಹೋದೆ. ಹೆಂಗಿಟ್ಟು ಅತ್ತೆ ದರ್ಬಾರ್?

- ಬಿಟ್ಟೀರ ಚೊಂದಮ್ಮ ಶಂಭು.

*ಬಾಲ ಸಂಗಾತಿ ವಿಭಾಗ : ಜ್ಞಾನ -15*

ಶಾಲೆಲಿ ಹೇಳಿಕೊಟ್ಟದ್ದೆಲ್ಲಾ ನಿಜ ಅಲ್ಲ

## ಭಾರತೀಯ ಕಾಲಗಣನೆ

ಮಾನವನ ದಿನದ ಅಥವಾ ರಾತ್ರಿಯ ಕಾಲು ಭಾಗನ "ಯಾಮ"ತ್ತೇಳಿ ಕರ್ದವೆ. (6 'ಫಲ' ತೂಕ ಇರುವ ತಾಮ್ರದ ಒಂದ್ ಪಾತ್ರೆನ ಮಾಡಕು, ಅದ್ ಒಂದು ಪ್ರಸ್ಥ ಪ್ರಮಾಣದಷ್ಟ್ ನೀರ್ ಹಿಡ್ಸ್‌ವಂಗಿರೊಕು "ಮಾಷ" ಚಿನ್ನದ ನಾಲ್ಕ್ ಅಂಗುಲ ಉದ್ದದ ಸೂಜಿನ ಮಾಡ್ಸಿ, ಆ ಸೂಜಿಲಿ ತಾಮ್ರದ ಪಾತ್ರೆಯ ತಳಲಿ ರಂಧ್ರನ ಕೊರ್ದ್ ನೀರ್‌ಲಿ ಆ ಪಾತ್ರೆನ ತೇಲಿ ಬಿಡಕು. ಪ್ರಸ್ಥ ಪರಿಮಾಣದ ಪಾತ್ರೆ ತುಂಬ ನೀರ್ ತುಂಬಿ ಅದ್ ನೀರ್‌ಲಿ ಮುಳ್ಗಿಕೆ ತಕಣುವ ಸಮಯನ 'ನಾಡಿಕಾ'ತ ಹೇಳುವೆನ ತಲಾ ನಾಲ್ಕ್ ಪ್ರಹರಗಳ್‌ಂದ ಮಾನವನ ದಿನ ಮತ್ತೆ ರಾತ್ರಿಗ ನಿಗದಿತ ಆದೆ. ಹದಿನೈದು ದಿನ ಮತ್ತು ರಾತ್ರಿಗಳ್‌ಂದ ಪಕ್ಷ ಆದೆ. ಪಕ್ಷಗ ಎರಡ್ ರೀತಿ ಇದ್ದ್, ಕೃಷ್ಣ ಪಕ್ಷ, ಶುಕ್ಲ ಪಕ್ಷತ ಗುರುತಿಸಲ್ಪಟ್ಟದೆ. ಈ ಎರಡೂ ಪಕ್ಷಗ ಸೇರಿ ಒಂದು ತಿಂಗ (ಮಾಸ)ಆದೆ. ಎರಡು ತಿಂಗಗ ಒಂದು ಋತುನೂ 6 ತಿಂಗಗ ಒಂದು ಆಯನನೂ ಆದೆ. ಆಯನಲೂ ಎರಡು ರೀತಿ ಉಟ್ಟು. ಉತ್ತರಾಯಣ ಮತ್ತೆ ದಕ್ಷಿಣಾಯಣತ. ಈ ಎರಡೂ ಆಯನಗಳ ಸೇರಿರೆ, ದೇವತೆಗಳ ಒಂದು ಹಗಲು ಮತ್ತೆ ರಾತ್ರಿ. ಲೋಕದ ಜನ ಇವುಗಳ್ನ ಒಂದು ವರ್ಷ ಅಥವಾ ಹನ್ನೆರಡು ತಿಂಗಗತ ಹೇಳುವೆ.

ಇಂತಹ ನೂರು ವರ್ಷಗ ಸೇರಿರೆ ಮಾನವನ ಪರಮಾಯುಸ್ಸು, ಚಂದ್ರ ಮುಂತಾದ ಗ್ರಹಗ, ಅಶ್ವಿನಿ ಆದಿ ನಕ್ಷತ್ರಗ, ಸಮಸ್ತ ತಾರಾಮಂಡಲದ ಅಧಿದೇವತೆಯಾದ ಸೂರ್ಯನೂ ಪರಮಾಣುವಿಂದ ಸಂವತ್ಸರದವರೆಗಿನ ಕಾಲಲಿ ಹನ್ನೆರಡ್ ರಾಶಿಗಳ್ನ ಉಂಟ್‌ಮಾಡಿಕಂಡ್ ಭುವನ ಕೋಶದ ನಿರಂತರ ಪರಿಕ್ರಮವನ್ನು ಮಾಡುತ್ತಿದ್ದವೆ. ಸೂರ್ಯ, ಬೃಹಸ್ಪತಿ, ಚಂದ್ರ ಮತ್ತು ನಕ್ಷತ್ರಕ್ಕೆ ಸಂಬಂಧಪಟ್ಟ, ತಿಂಗಗಳ ಭೇದಂದ ಈ ವರ್ಷನ ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ಮತ್ತೆ ವತ್ಸರತ ಬೇರೆ ಬೇರೆ ಹೆಸ್ರ್‌ಗಳ್‌ಂದ ನಿರ್ದೆಶಿಸುವೆ.

ಮುಂದ್‌ವರ್ದದೆ. - ಬಿಟ್ಟೀರ ಚೊಂದಮ್ಮ ಶಂಭು

16 ನೇ ಪುಟದಿಂದ

ಗೊಳಿಸಲಾಯಿತು. ಆದರೆ ದೊಡ್ಡ ಗಾತ್ರದ ಇಂತಹ ಅನೇಕ ಟೈಪೋ ಗ್ರಾಫರ್ ಮಾದರಿಗಳು ಜನಮನ್ನಣೆ ಪಡೆಯಲಿಲ್ಲ.

ನ್ಯೂಯಾರ್ಕ್ ನಗರದ ರೆಮಿಂಗಟನ್ ಕಂಪೆನಿ 1875 ನೇ ವರ್ಷದಲ್ಲಿ ತನ್ನದೇ ಹೆಸರಿನಿಂದ 1867 ರಲ್ಲಿ ಅಮೆರಿಕಾದ ಕ್ರಿಸ್ಟೋಫರ್ ಶೋಲ್ಸ್ ಶೋಧಿಸಿದ ಟೈಪರೈಟರ್‌ನ್ನು ಮಾರುಕಟ್ಟೆಗೆ ತಂದರು. ಈ ಮಾದರಿ ತಯಾರಿಸಲು ಅವರು ಎರಡು ವರ್ಷ ಶ್ರಮಿಸಿದ್ದರು.

ಇಷ್ಟಾದರೂ 1909 ರ ಒಳಗೆ ಚಿಕ್ಕದಾದ ಎಲ್ಲಿಯಾದರೂ ಒಯ್ಯಬಹುದಾದಂತಹ ಟೈಪರೈಟರ್‌ನ್ನು ಅಭಿವೃದ್ಧಿ ಪಡಿಸಿದ್ದಿಲ್ಲ. ಕ್ರಮೇಣ ಅಭಿವೃದ್ಧಿ ಪಡಿಸಲಾಯಿತು.

ವೇಗವಾಗಿ ಮುದ್ರಿಸಬಲ್ಲ ಟೈಪರೈಟರನ್ನು 1953 ರಲ್ಲಿ ಆರಂಭಿಸಲಾಯಿತು. ಈಗಂತೂ ಕೈಯಲ್ಲಿಯೇ ಹಿಡಿದು ಕೊಂಡೊಯ್ಯಬಹುದಾದ ಟೈಪರೈಟರ್ ಮಾರುಕಟ್ಟೆ ಯಲ್ಲಿ ಲಭ್ಯವಿದ್ದರೂ ಕಂಪ್ಯೂಟರೀಕರಣಗೊಂಡಿರುವ ಎಲ್ಲೆಡೆ ಟೈಪರೈಟರ್‌ಗಳು ಕಣ್ಮರೆಯಾಗುತ್ತಿವೆ. ಮುಂದೊಂದು ದಿನ ಟೈಪರೈಟರ್‌ನ್ನು ಕೇವಲ ಸಂಗ್ರಹಾಲಯದಲ್ಲಿ ನೋಡು ವಂತಾದೀತು.

- ಕೋಳುಮುಡಿಯನ ಮಿಲನ್ ಕುಮಾರ್,ಗಾಳಿಬೀಡು.

ದೇಶ ಆಳುವ ಜನಕ್ಕೆ ಮೋಸತನ ನ್ಯಾಯವೇ

# ಹೆಣ್ಣ್- ಗಂಡ್ ವಹಿಸಿ ಕೊಡ್ದು ಅರೆಗನ್ನಡಲಿ ಆಗಲಿ

ಗೌಡ ಜನಾಂಗದ ಹಲವ್ ಸಂಪದಾಯಗ ಕ್ರಮೇಣ ಕಣ್ಮರೆಯಾಗ್ತಾ ಒಳೋ. ಗೌಡ ಜನಾಂಗದ ಮೊದುವೆ ಕಾರ್ ಬಾರ್‌ಲಿ, ಹೆಣ್ಣಿಳ್ಸಿಕಾಕನ, ದಿಬ್ಬಣದ ಮುಖ್ಯಸ್ಥರ ವಶಕ್ಕೆ ಗಂಡ್ ಮತ್ತ್ ಹೆಣ್ಣ್‌ನ ಒಪ್ಪುಸ್‌ಕಾಕನ ಹೇಳ್‌ವ ಮಾತ್‌ಗಳ್ನ ಹೆಣ್ಣ್ ಗಂಡ್ ವಹಿಸುದೂತ ಹೇಳ್‌ವೆ. ಅರೆಗನ್ನಡ ಭಾಷೆಲಿ ಹೆಣ್ಣ್- ಗಂಡ್ ವಹಿಸುವ ಕ್ರಮ ಬೆಳವಣಿಗೆಯಾಗಲಿತ್ತೇಳಿ ಈ ಬರಹನ ನಿಮ್ಮ ಮುಂದಿಡ್ತಾ ಒಳೊ.

ಹೆ. ವ. : ಹೆಣ್ಣ್ ವಹ್ಸಿ ಕೊಡೊವು

ದಿ. ಮು.: ದಿಬ್ಬಣದ ಮುಖ್ಯಸ್ಥರ್

ಹೆ. ವ. : ಪರಮ ವೈಭವಂದ ತಮ್ಮ ಇಷ್ಟ ಮಿತ್ರ ರೊಟ್ಟಿಗೆ ಗಂಡ್‌ನ ಕಡೆಂದ ಬಂದ ದಿಬ್ಬಣದ ಮುಖ್ಯಸ್ಥರಾದ ಮಹನೀಯರ್ ಯಾರಯ್ಯ?- ದಿ. ಮು.: ನಾವಯ್ಯ

ಹೆ.ವ. :ಹಂಗಾದರೆ ನಾವ್ ನಮ್ಮ ಪಂಡ್‌ನ ಪದ್ಧತಿಯಂಗೆ, ವಿಜ್ಞಾಪನೆನ ಸ್ವೀಕರಿಸಿ, ಚಂದ್ರರಾಜತ್ತೇಳುವ ಪುರುಷಂಗೆ, ಪದ್ಮಾವತಿತ್ತೇಳುವ ಕನ್ನಿಕೆನ, ವಧೂವರರಾಗಿ ಮಾಡುದುತ ಈ ಮೊದ್ಮೆ ಮಾತುಕತೆ ನಡ್ಸಿ, ವಾಗ್ದಾನ ಮಾಡಿ ಕಣ್ಡ್ ಸರಿ ತಾನೆ?- ದಿ. ಮು: ಹೌದು

ಹ. ವ. : ಮಾತ್‌ನಂಗೆ ನಾವ್ ಎರಡ್‌ಕಡೆವು ಸೇರಿ ಆಕಾಶದಷ್ಟ್ ದೊಡ್ಡ ಚಪ್ಪರ ಹಾಕಿ, ಭೂಮಿಯಷ್ಟ್ ದೊಡ್ಡ ಹಸೆ ಬರ್ದ್, ರತ್ನಖಚಿತವಾದ ಮಂಟಪದಡಿಲಿ, ಸಮಸ್ತ ಬಂಧು ಬಾಂಧವರ ಸಮಕ್ಷಮಲಿ, ಅಗ್ನಿಸಾಕ್ಷಿಯಾಗಿ ನಮ್ಮ ಕನ್ಯಾರತ್ನನ ಧಾರೆಯೆರೆದ್ ಕೊಟ್ಟೊಳೊ ತಾನೆ?- ದಿ. ಮು. : ಹೌದು

ಹೆ. ವ.: ಹಂಗಾದರೆ, ನಿಮ್ಮ ಹೈದಂಗೆ ಸಾವಿರಾರು ವರಹದ ಚಿನ್ನಾಭರಣಗಳಿಂದ ಅಲಂಕರ್ಸಿ ನಮ್ಮ ಸ್ವಾಧೀನಕ್ಕೆ ಕೊಟ್ಟ ಮ್ಯಾಲೆ, ಮನೆದೇವ್ರ ಅನುಗ್ರಹದಿಂದ ಹಾಗೂ ಸಭಿಕರ ಕರುಣಾ ಕಟಾಕ್ಷದ ಇದೇ ಭವನದ ಮುಂದ್‌ಗಡೆ ಹಾಕಿರುವ ಹನ್ನೆರಡ್ ಕಂಬಗಳ ಕಯ್ಯಾಲೆ ಚಪ್ಪರದ ಮೇಲ್ಕಟ್ಟಡಿಲಿ ಕನ್ಯೆ ಕೈ ಧಾರೆ ವ್ರತಗಳನ್ನ ಮಾಡಿ, ಪುರುಷನ ದ್ವಯ ಹಸ್ತಗಳಿಗೆ ಚಾರು ಹಸ್ತಗಳನ್ನಾಗಿ ಮಾಡಿದರ್ಲಿ ಯಾವ ಲೋಪದೋಷ ಕಂಡ್ ಬಾತ್ಲೆ ತಾನೆ? ದಿ. ಮು.: ಇಲ್ಲೆ

ಹ. ವ.: ಹಂಗಾದರೆ ನಮ್ಮ ಮುದ್ದು ಗೂಡೆನ ನಿಮ್ಮ ಸ್ವಾಧೀನಕ್ಕೆ ಒಪ್ಪಿಸಿಕೊಟ್ಟಿವೆ. ಹಂಗೆ ಒಪ್ಪಿಸಿಕಾಕನ ಗೂಡೆಗೆ 'ಹನ್ನೆರಡ್-ಹನ್ನೆರಡ್- ಇಪ್ಪತ್ತನಾಲ್ಕ್ ವರಹಗಳನ್ನ, ಉಡಿಕೆ ವಸ್ತ್ರಗಳ್ನ, ತೊಡಿಕೆ ಚಿನ್ನಾಭರಣಗಳ್ನ, ಊಟ ಮಾಡಿಕೆ ಬೆಳ್ಳಿ ಬಟ್ಲ್, ಕೈ ತೊಳಿಯಕೆ ಬೆಳ್ಳಿ ಗಿಂಡಿನ, ಹಾಲು ಕರೆಕೆ ಗೋವುನ ಹಿಂಡ್‌ನ ಬಳುವಳಿಯಾಗಿ ಕೊಟ್ಟಿವೆ. ಹಿಂಗೆ ನಾವ್‌ಕೊಟ್ಟ ಅಲ್ಪ ಐಶ್ವರ್ಯನ ಒಂದಕ್ಕೆ ಹತ್ತ್, ಹತ್ತಕ್ಕೆ ನೂರ್, ನೂರಕ್ಕೆ ಸಾವಿರ ಸಂಖ್ಯೆಲಿ ಅಭಿವೃದ್ಧಿ ಪಡ್ಸಿ ಕೀರ್ತಿಗಳ್ಸವಂಗೆ ಮಾಡ್‌ವ ಖ್ಯಾತಿವಂತ ಮಹಾಶಯರ್ ಯಾರಯ್ಯ?- ದಿ. ಮು.: ವರನಯ್ಯ

ಹೆ.ವ.: ನಮ್ಮ ಗೂಡೆಗೆ ಕಡೆ ಹಲ್ಲ್ ಬಾತ್‌ಲ್ಲೆ, ನೆತ್ತಿ ಎಣ್ಣೆ ಆರ್ತ್‌ಲೆ, ಅಂಗ್ಯ ಬರೆ ಮಾಸಿತ್ಲೆ, ಬುದ್ಧಿಜ್ಞಾನ ಬಾತ್‌ಲೆ, ಹೆತ್ತ ಅಪ್ಪ, ಅವ್ವನ ಮರ್ತತ್ಲೆ, ಹಸಿ ಕಡಿಯಕೆ ಗೊತ್ಲೆ, ಒಣಗಿಲ್ ಮುರಿಯಕೆ ಗೊತ್ಲೆ, ಬೀಸಿ ಗುಡ್ಸಿಕೆ ಗೊತ್ಲೆ, ಹಾಸಿಗೆ ಹಾಸಿಕೆ ಗೊತ್ಲೆ. ಅಂಗಳಲಿ ಆಡಿ, ಹಾಲ್ ಉಂಡ್, ಮೆಟ್ಲ್‌ಲಿ ಓಡಿ, ತೊಟ್ಲ್‌ಲಿ ಮಲ್ಗಿಕೆ ಇಷ್ಟ ಪಡುವ ಮುದ್ದು ಗೂಡೆಗೆ ತಕ್ಕ ಬುದ್ಧಿವಾದ ಬೋಧ್ಸವ ಬೋಧಕರ್ ಯಾರಯ್ಯ?

ದಿ.ಮು. :ವರನ ಹಿರಿಯರ್

ಹೆ. ವ.: ನಮ್ಮ ಗೂಡೆಗೆ ಸಣ್ಣತ್ತಿರ್ಕನಿಂದಲೂ ಮಾವನ ಮನ ಗುಣ ಗೊತ್ಲೆ. ಅತ್ತೆನ ಅಡಿಗೆ ಕೆಲ್ಸ ಗೊತ್ಲೆ, ಅಕ್ಕ ತಂಗೆಯರ ಹಂಗಿಗೆ ಒಲಪಟ್ಟಿತ್ಲೆ. ಕುಟುಂಬದ ಕೂಟಕ್ಕೆ ಕೂಡಿತ್ಲೆ. ಹಿಂಗಿರ್‌ಕಾಕನ ಏನಾದರ್ ಮಾತ್‌ಲಿ ಕಲಹಗ ಬಂದರೆ ಅದನ್ನ ನಿವಾರಿಸವು ಯಾರಯ್ಯ?- ದಿ. ಮು.: ವರನಯ್ಯ

ಹೆ. ವ. : ಹಂಗಾದರೆ, ದಿಬ್ಬಣದ ಮುಖ್ಯಸ್ಥರೇ, ನಾವ್ ಹೇಳ್ದ ಮಾತ್‌ಗೆ ಎರಡ್ ಆಡದೆ, ನಾವ್ ಕೊಡುವ ಕನ್ಯಾರತ್ನನ, ಭಕ್ತ ವತ್ಸಲ ಭಕ್ತರನ್ನ ಪ್ರೀತಿಸುವಂಗೆ, ನರಹರಿಯು ಕೂರ್ಮನನ್ನು ಕಾಯುವಂಗೆ ಹಸ್ ತನ್ನ ಎಳೆಗರುವನ್ನೂ ಪ್ರೀತಿಸುವಂಗೆ, ಪ್ರೀತಿಸುವಿರೆಂಬುದಾಗಿ, ಅಗ್ನಿಸಾಕ್ಷಿಯಾಗಿ ನಾವ್ ನಂಬುವೆ, ಇನ್ನ್ ಮುಂದೆ ದಯಾಸಾಗರನಾದ ಪರಮಾತ್ಮನ ಅನುಗ್ರಹಂದ ವಂಶಾಭಿವೃದ್ಧಿಯಾಗಿ ಬಾಳಲಿತ್ತೇಳಿ, ಸರ್ವ ಸಂಪನ್ನ ಭಾಗ್ಯ ಸಮೃದ್ಧರಾಗಿ, ದೀರ್ಘಾಯುಷ್ಯವಂತರಾಗಿಯೂ ಬಾಳು ನಡೆಸುವಂಗೆ ಕುಲದೇವ್ರ ವೆಂಕಟರಮಣ ಅನುಗ್ರಹಿಸಲಿತ ನಾವೆಲ್ಲ ಪ್ರಾರ್ಥಿಸೋಣ.

"ಹತ್ತ್ ಕುಟುಂಬ ಹದಿನೆಂಟ್ ಗೋತ್ರ ಕುಲಸ್ಥರ ಸಭೆ ಸಮಸ್ತರ ಸಂಗಡ ಕೇಳಿ ಹೆಣ್ಣ್, ಗಂಡ್‌ನ (ನವದಂಪತಿಗಳ್ನ) ದಿಬ್ಬಣದ ಮುಖ್ಯಸ್ಥರಿಗೆ ವಹಿಸಿಕೊಡುವಂತೇವೇ......

ಸಭಿಕರ್ ಒಳ್ಳೆ ಕಾರ್ಯವಂತೇವೇ..........

ವಿ. ಸೂ. ಪಂಡ್ ಬಾಲವಿವಾಹ ಪದ್ಧತಿಲಿ ನಡ್ಸ್‌ಬಂದದ್. ಇದನ್ನು ಹದಿನೈದು ವರ್ಷ ಒಳಗಿರುವ ಮಕ್ಕ ಅಭ್ಯಾಸ ಮಾಡಿ ಶುಭ ಕಾರ್ಯಲಿ ಹೇಳೋಕುತ ನಮ್ಮ ಇರಾದೆಯಾಗುಟ್ಟು

-ಪಟ್ಟಡ ಶಿವಕುಮಾರ್, ನಿರ್ದೇಶಕರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ.

-ಸಂಪಾದಕಿ.

ಕೂತು ಉಂಬವಗೆ ಕುಡಿಕೆ ಹಣ ಸಾಲದು

## ಪ್ರಕಟಣೆಗಳು

# ಕಾವೇರಿನಾಡು ವಿದ್ಯಾಸಂಸ್ಥೆ ಬೆಂಗಳೂರು

### ವಿಶೇಷ ಪ್ರಕಟಣೆ :

ಬೆಂಗಳೂರಿನ ನೆಲಮಂಗಲ ಸಮೀಪ ಕಾಡುಕುರೇನ ಹಳ್ಳಿಯೆಂಬಲ್ಲಿ ಈಗ್ಗೆ ಏಳೆಂಟು ವರ್ಷಗಳ ಹಿಂದೆ ಕಾವೇರಿ ನಾಡೊಂದು ಪುಟ್ಟದಾಗಿ ಜನ್ಮ ತಾಳಿದ್ದು, ಕೊಡಗಿನ ಹಲವಾರು ಗೌಡ ಬಂಧುಗಳು ಇಲ್ಲಿ ನಿವೇಶನಕ್ಕಾಗಿ ತಮ್ಮ ಹೆಸರನ್ನು ನೋಂದಾಯಿಸಿರುವುದು ಸರಿಯಷ್ಟೆ. ಹಲವಾರು ಎಡರು ತೊಡರುಗಳಿದ್ದಲ್ಲೂ ಇಲ್ಲೀ ತನಕ ಸುಮಾರು 87 ನಿವೇಶನಗಳ ಹಕ್ಕು ಪತ್ರಗಳನ್ನು ನಮ್ಮ ಕುಲಬಾಂಧವರಿಗೆ ನೀಡಲಾಗಿದೆ. ಇತ್ತೀಚೆಗೆ ನಿವೇಶನಕ್ಕಾಗಿ ಹಣ ನೀಡಿದ ಪ್ರತಿಯೊಬ್ಬರಿಗೂ ಪತ್ರ ಮುಖೇನ ತಿಳಿಸಲಾಗಿದ್ದು ಕೆಲವರು ಈಗಾಗಲೇ ನಿವೇಶನವನ್ನು ತಮ್ಮ ಹೆಸರಿಗೆ ನೊಂದಾಯಿಸಿ ಕೊಳ್ಳುತ್ತಿದ್ದಾರೆ. ಉಳಿದವರು ಸಹ ಆದಷ್ಟು ಶೀಘ್ರವಾಗಿ ಹಣ ಪೂರ್ತಿ ನೀಡಿ ತಮ್ಮ ಹೆಸರಿಗೆ ನಿವೇಶನವನ್ನೂ 31-12-2003 ರ ಒಳಗಾಗಿ ನೊಂದಾಯಿಸಿಕೊಂಡು ಕಾವೇರಿ ನಾಡಿನ ಅಭಿವೃದ್ಧಿಗೆ ಸಹಕರಿಸುವಂತೆ ವಿನಂತಿಸುತ್ತಿದ್ದೇನೆ.

ಅಂತೆಯೇ ದಿನಾಂಕ 1-11-2003 ರ ಕನ್ನಡ ರಾಜ್ಯೋತ್ಸವ ದಿನದಂದು ಬೆಂಗಳೂರಿನ ಕಂಠೀರವ ಕ್ರೀಡಾಂಗಣ ಮೈದಾನದಲ್ಲಿ ಸುಮಾರು 1040 ಶಾಲಾ ಮಕ್ಕಳಿಂದ "ಸುಗ್ಗಿ ಸುವ್ವಾಲೆ" ಕುಣಿತ ನೃತ್ಯ ಕಾರ್ಯಕ್ರಮವು ಶ್ರೀ ಅಮ್ಮಾಜೀರ ಪೊನ್ನಪ್ಪನವರ ಸಾರಥ್ಯದಲ್ಲಿ ಮೂಡಿ ಬರಲಿದೆ.

ಅಧ್ಯಕ್ಷರು, ಕಾವೇರಿ ನಾಡು ವಿದ್ಯಾಸಂಸ್ಥೆ, ಕಾಡುಕುರೇನ ಹಳ್ಳಿ, ಮಹದೇವಪುರ ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, - 562 123

***ಸಂಪರ್ಕಿಸುವ ವಿಳಾಸ : 080/7738126, 7738412, 6342822, 3546884 Mobile : 94480 77381***

## ನಿಧನ

ಮಡಿಕೇರಿ ತಾಲ್ಲೂಕು ಅವಂದೂರು ಗ್ರಾಮದ ಕಡ್ಯದ ರಾಘವಯ್ಯನವರು ದಿನಾಂಕ 22-8-2003 ರಂದು ತಮ್ಮ ಸ್ವಗೃಹದಲ್ಲಿ ನಿಧನರಾದರು. ದಿವಂಗತರಿಗೆ 66 ವರ್ಷ ಪ್ರಾಯವಾಗಿತ್ತು. ಮೃತರು ಪತ್ನಿ ಹಾಗೂ 4 ಗಂಡು ಮಕ್ಕಳನ್ನು ಹಾಗೂ ಒಬ್ಬಳು ಹೆಣ್ಣು ಮಗಳನ್ನು ಮತ್ತು ಅಪಾರ ಬಂಧು ವರ್ಗವನ್ನು ಆಗಲಿದ್ದಾರೆ. ಶ್ರೀಯುತರು ಅವಂದೂರು ಗ್ರಾಮದ ದೇವತಕ್ಕರಾಗಿ ಸುಮಾರು 55 ವರ್ಷಗಳಿಂದ ದೇವರ ಸಕಾರ್ಯವನ್ನು ಮಾಡಿರುತ್ತಾರೆ ಎಂದು ತಿಳಿದು ಬಂದಿದೆ.

ವರದಿ : ನೀಶ ಪ್ರಭಾಕರ್, ಮೈಸೂರು

# 5ನೇ ವರ್ಷದ ಪುಣ್ಯಸ್ಮರಣೆ

ದಿ|| ಬೊಳ್ಳೂರು ನಂಜಪ್ಪ



ಜನನ : 5-10-1905
ಮರಣ : 11-9-1998

ನೀವು ನಮ್ಮನ್ನಗಲಿ ಐದು ಸಂವತ್ಸರಗಳು ಕಳೆದರೂ ನಿಮ್ಮ 93 ವರ್ಷದ ತುಂಬು ಜೀವನ ಯಾತ್ರೆ ಯಲ್ಲಿ ನಮಗೆ ನೀವು ತೋರಿಸಿದ ಮಾರ್ಗದರ್ಶನ, ಸೂಕ್ತ ಸಲಹೆ, ಪ್ರೀತಿ ವಾತ್ಸಲ್ಯಗಳು ಇಂದಿಗೂ ಅಚ್ಚಳಿಯದೆ ಅದೇ ರೀತಿಯಲ್ಲಿ ಮುನ್ನಡೆಯುತ್ತಿರುವೆವು. ನಿಮ್ಮ ಆತ್ಮಕ್ಕೆ ಪರಮಾತ್ಮನು ಚಿರಶಾಂತಿ ಯನ್ನು ನೀಡಲೆಂದು ಪ್ರಾರ್ಥಿಸುವ.

*ಪತ್ನಿ: ಚಂದ್ರಮ್ಮ, ಮಕ್ಕಳಾದ : ಲಿಂಗರಾಜು, ದೀಕ್ಷ ಕುಮಾರ್, ಸನತ್‌ಕುಮಾರ್, ಪುತ್ರಿಯರಾದ : ತಾಯಮ್ಮ, ಹರಿಣಿ, ಕಿಲ್ಲಬಾಯಿ, ಲೀಲಾಬಾಯಿ, ಅಳಿಯಂದಿರು, ಸೊಸೆಯಂದಿರು, ಮಕ್ಕಳು, ಮೊಮ್ಮಕ್ಕಳು, ಅಪಾರ ಬಂಧುವರ್ಗದವರು, ಮರಗೋಡು.*

***ಕಿರು ಪರಿಚಯ :***

ಬೊಳ್ಳೂರು ನಂಜಪ್ಪನವರು ದಿನಾಂಕ 5-10-1905 ರಲ್ಲಿ ಮರಗೋಡು ಗ್ರಾಮದಲ್ಲಿ ಜನಿಸಿದರು. ನಾಲ್ಕನೇ ತರಗತಿ ತನಕ ಓದಿದ ಇವರು ವಯಸ್ಸಿಗೆ ಬಂದಾಗ ಚೆರಿಯಮನೆ ಐಯ್ಯಣ್ಣನವರ ಮಗಳನ್ನು ಮದುವೆಯಾಗಿ ಕಾರಣಾಂತರ ಅವರು ಮೃತ ಪಟ್ಟಾಗ ಹೊಸ್ಕೇರಿ ಗ್ರಾಮದ ಅಚ್ಚಾಂಡೀರ ಐಯ್ಯಣ್ಣನವರ ಮಗಳು ಚಂದ್ರಮ್ಮಳನ್ನು 1951 ನೇ ಇಸವಿಯಲ್ಲಿ ಮದುವೆಯಾಗಿ 3 ಗಂಡು ಒಂದು ಹೆಣ್ಣು ಮಕ್ಕಳ ತಂದೆಯಾದರು. 1951 ನೇ ಇಸವಿಯಿಂದ ಎಡೆಬಿಡದೆ 32 ವರ್ಷಗಳ ದೀರ್ಘ ಕಾವೇರಿ ತೀರ್ಥ ಸ್ನಾನ ಮಾಡಿದ ಕೀರ್ತಿ ಶ್ರೀಯುತರದು. ಅಲ್ಲದೇ 3 ಬಾರಿ ತಿರುಪತಿಯಾತ್ರೆ ಮಾಡಿ ತಿರುಪತಿ ತಿಮ್ಮಪ್ಪನ ದರ್ಶನ ಪಡೆದು, ದೇಶದ ವಿವಿಧ ಸ್ಥಳಗಳಾದ ಕಾಶೀ, ವಾರಣಾಸಿ, ಗೋಕರ್ಣ, ಪಳನಿ, ಮದುರೆ, ಜಮ್ಮು ಕಾಶ್ಮೀರ, ದಿಲ್ಲಿ, ಕಲ್ಕತ್ತ, ಬೊಂಬಾಯಿ ಮೊದಲಾದ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿದ್ದಾರೆ.

ಊರಿನಲ್ಲಿ ಅಂದು ಸರಿಯಾದ ರಸ್ತೆಗಳು, ಕಾಲೇಜುಗಳು ಇಲ್ಲದ ಕಾಲದಲ್ಲಿ ಅವುಗಳಿಗಾಗಿ ಜನರ ಸಹಾಯ ಪಡೆದು, ಕಷ್ಟಪಟ್ಟು, ಸಂಘ ಸಂಸ್ಥೆಗಳಲ್ಲಿ ದುಡಿದು ಬೊಳ್ಳೂರು ಮನೆಗೆ ಒಳ್ಳೇ ಹೆಸರನ್ನು ತಂದಿರುವ ದಿವಂಗತರ ಜೀವನದ ತನ್ನಂಶದಲ್ಲಿ 3 ಗಂಡು, 4ಹೆಣ್ಣು ಮಕ್ಕಳು 20 ಮೊಮ್ಮಕ್ಕಳು, 19 ಮರಿ ಮಕ್ಕಳನ್ನು ಪಡೆದ ಇವರ ಆತ್ಮಕ್ಕೆ ಶಾಂತಿ ಕೋರುವ.

*-ಲೇಖನ : ಮಾಳಿಗೆ ಮನೆ ಜನಾರ್ಧನ, ಮರಗೋಡು*

ಲಂಚ ತಿಂಬವಗೆ ಕೋಟಿ ಹಣ ಸಾಲದು

ಜನನ : 1793 ಮರಣ : 31-10-1837

## ಸುಭೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡ



ಕೊಡಗಿನ ಮಣ್ಣಿನಲ್ಲಿ ಪ್ರಥಮ ಸ್ವಾತಂತ್ರ್ಯದ ಕಿಡಿ ಹೊತ್ತಿಸಿ ಅಸ್ತಂಗತರಾದ ದಿ|| ಸುಭೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರು, ಭವ್ಯ, ಸುಂದರ, ಪುಟ್ಟ, ಕಾಶ್ಮೀರ... ಏನೇನೋ ಹೊಗಳಿಸಿಕೊಳ್ಳುವ ಕೊಡಗಿನಲ್ಲಿ ದಿವಂಗತರಿಗೆ ಸಲ್ಲುವ ಮಾನ ಮರ್ಯಾದೆ ಇನ್ನೂ ಯಾಕೆ ಸಲ್ಲಲಿಲ್ಲ ಅನ್ನುವ ಬಗ್ಗೆ ಕೊಡಗಿನ ಸರ್ವ ಜನತೆ ಜಾತಿ, ಮತ ಮರೆತು ಚಿಂತಿಸುವರೆ? ಭವ್ಯ ಭಾರತದ ಇತಿಹಾಸ ಪುಟಗಳಲ್ಲಿ ರಾರಾಜಿಸಬೇಕಿದ್ದವರು? ಆದರೆ ಇಂದು......ಏನಾಗಿದೆ? ಯಾಕೆ ಹೀಗೆ ಜನರಿಗೆ ತಾತ್ಸರ ? ಸಂಬಂಧಪಟ್ಟವರು ಎಚ್ಚೆತ್ತುಕೊಳ್ಳದಿದ್ದರೆ ಬೀದಿಗಿಳಿದು ಹೋರಾಡುವುದು ಅನಿವಾರ್ಯವಾಗಿದೆ. ಕೊಡಗಿನ ವೀರ ಪರಂಪರೆಯವರೆ ಏಳಿ, ಎದ್ದೇಳಿ, ಎಚ್ಚೆತ್ತು ಈಗಲಾಗಲೂ ಸಲ್ಲಿಸುವ ಪುರಸ್ಕಾರ ನೀಡಿ ಸತ್ಕರಿಸಿ. ವರ್ಗಬೇಧ ಮಾಡದೆ ಮುಂದೆ ಬನ್ನಿ. ಕೊಡಗಿನ ಅಭಿವೃದ್ಧಿಗೆ ನಾವೆಲ್ಲರೂ ಜೊತೆಯಾಗಿ ಹೋರಾಡೋಣ.

- ಪಟ್ಟಡ ಪ್ರಭಾಕರ್, ಮೈಸೂರು.

ಚಿತ್ರ : ಕೊಡಗು ಸಂಗಾತಿ

## ಬೆಂಗಳೂರಿಗೆ ಆಗಮನ

*ದಿನಾಂಕ 12-10-2003 ರಂದು ಬೆಂಗಳೂರಿನ ನೆಲಗದರನ ಹಳ್ಳಿಯಲ್ಲಿ ಗೌಡರ ವಾರ್ಷಿಕ ಮಹಾಸಭೆ ಮತ್ತು ಸಂತೋಷ ಕೂಟಕ್ಕೆ ಸಂಗಾತಿ ಪತ್ರಿಕೆಯ ಗೌರವ ಸಂಪಾದಕರು ಮತ್ತು ಬಳಗವು ಆಗಮಿಸಲಿದ್ದಾರೆ. ಪತ್ರಿಕೆ ನವೀಕರಿಸಲಿರುವವರು ಅಂದು ತಪ್ಪದೆ ನವೀಕರಿಸಿಕೊಳ್ಳುವುದು.*

- ಸಂಪಾದಕ

ದಿ|| ಪಾರೆಮಜ್ಲು ಟಿ. ಅಪ್ಪಯ್ಯ
ಜನನ : 10-5-1949
ಮರಣ : 17-10-2002



## ಮೊದಲನೇ ವರ್ಷದ ಪುಣ್ಯಸ್ಮರಣೆ

ನೀವು ನಮ್ಮನ್ನು ಅಗಲಿ ಒಂದು ವರ್ಷ ಕಳೆದರೂ ನಿಮ್ಮ ಸವಿನೆನಪು ನಮ್ಮಲ್ಲಿ ಹಚ್ಚ ಹಸುರಾಗಿ ಉಳಿದಿದೆ. ನಿಮ್ಮ ಆದರ್ಶ ಗುಣಗಳು, ನಮಗಾಗಿ ದುಡಿದ ನಿಸ್ವಾರ್ಥ ನೆನಪುಗಳು ಆಗಾಗ ನೆನಪಿನಲ್ಲಿ ಬರುತ್ತಿದೆ. ನಿಮ್ಮ ಆತ್ಮಕ್ಕೆ ಭಗವಂತನು ಸದಾ ಶಾಂತಿ ನೀಡಲೆಂದು ನಾವುಗಳೆಲ್ಲರೂ ದಿನನಿತ್ಯ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಪತ್ನಿ : ಪಿ.ಎ. ದೇವಮ್ಮ, ಪುತ್ರ: ಪಿ. ಎ. ರಾಜೇಶ್ ಕುಮಾರ್ (ಅರುಣ) ಪುತ್ರಿ: ಪಿ. ಎ. ಆಶಾ
ತಾಯಿ : ಪಾರೆಮಜ್ಲು ಸೀತಮ್ಮ, ಸಹೋದರರು ಮತ್ತು ಅಪಾರ ಬಂಧು ಬಳಗದವರು,
☎: 08272-227357, ಮುತ್ತಾರ್ಮುಡಿ

## ದಶ ವರ್ಷದ ಪುಣ್ಯಸ್ಮರಣೆ



ದಿ|| ಪ್ರವೀಣ್
ಮರಣ : 29-9-1993

*ಮುದ್ದಿನ ಪ್ರವೀಣ್,*

ಅಗಲುವುದು ಅನಿವಾರ್ಯ, ನೆನಪೊಂದೆ ಶಾಶ್ವತ ಎನ್ನುವಂತೆ ಅರಳುವ ಮುನ್ನವೇ ಕಮರಿದ ಹೂವಿನಂತೆ ವಿದಿವಶವಾಗಿ ನಮ್ಮಿಂದ ಅಗಲಿ 10 ವರ್ಷ ಕಳೆಯಿತು. ನೀನು ಮರೆಯಾದರೂ, ನಮ್ಮೆಲ್ಲರ ನೆನಪಿನಲ್ಲಿ ನಿನ್ನ ನಡೆ ನುಡಿಗಳು ಎಂದೆಂದೂ ಹಚ್ಚ ಹಸಿರು. ಆ ಭಗವಂತನು ಅಗಲಿದ ನಿನ್ನ ಆತ್ಮಕ್ಕೆ ಎಂದೆಂದೂ ಚಿರಶಾಂತಿಯನ್ನು ನೀಡಲೆಂದು ದಿನ-ದಿನವೂ ಬೇಡುವ ನಿನ್ನ ಪ್ರೀತಿಯ,

*ಅಮ್ಮ : ಚೇಯಪ್ಪನ ಪುಷ್ಪಾವತಿ ಸೋಮಯ್ಯ, ಅಣ್ಣ ಸತೀಶ್ ಸೋಮಯ್ಯ,*
*ಅಕ್ಕಂದಿರಾದ ಉಷ ಯಶೋಧರ, ಆಶಾ ಮಂಜುನಾಥ್*

## ನೆನಪು



ನೀನು ನಮ್ಮನ್ನೆಲ್ಲಾ ಅಗಲಿ 12 ವರ್ಷ ಸಂದರೂ ಸಹ ನೀನು ಕನಸಿನಲ್ಲಿ ಬಂದಾಗಲಾದರೂ ನಾನು ನಿನ್ನನ್ನ ನೆನಪಿಸಿಕೊಳ್ಳುತ್ತಿದ್ದೇನೆ. ನಿನ್ನ ಸಹಕಾರ ನನಗೀಗಬೇಕೆಂಬ ಭಾವನೆ ಮನಸ್ಸಿಗೆ ಆಗಾಗ ನುಸುಳುತ್ತದೆ. ಇಂತೂ ನಿನ್ನ ಆತ್ಮಕ್ಕೆ ಚಿರಶಾಂತಿಯನ್ನು ಪ್ರಾರ್ಥಿಸುವ,

ದಿ. ಪಟ್ಟಡ ಮುತ್ತಣ್ಣ ರವಿಕುಮಾರ್
ಜನನ : 8-2-1960
ಮರಣ : 29-9-1991

*ನಿನ್ನ ಅಣ್ಣ : ಪ್ರಭಾಕರ*

Reg. No. KA/SK/MYS-88/2003 Registered : 10-01-96 TCI Kar. 09592

# ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ)

ಬೆಂಗಳೂರು - 560 032

ನಮ್ಮ ಸಮಾಜದ ವಾರ್ಷಿಕ ಮಹಾಸಭೆ ಮತ್ತು ಸಂತೋಷ ಕೂಟವನ್ನು ದಿನಾಂಕ 12-10-2003 ನೇ ಭಾನುವಾರ ಪೂರ್ವಾಹ್ನ ಘಂಟೆ 9 ಕ್ಕೆ ಗೃಹಲಕ್ಷ್ಮಿ (ಹೆಚ್.ಎಂ.ಟಿ.) ಬಡಾವಣೆ, ನೆಲಗದರನಹಳ್ಳಿ, ಪೀಣ್ಯ, ಬೆಂಗಳೂರು ಇಲ್ಲಿ ಮುಖ್ಯ ಅತಿಥಿಗಳಾಗಿ ಡಾ. ನಂಗಾರು ಸುಕುಮಾರ ಗೌಡ, ಖ್ಯಾತ ಶಿಕ್ಷಣ ತಜ್ಞರು, ನಿವೃತ್ತ ಪ್ರಾಧ್ಯಾಪಕರು ಹಾಗೂ ಸ್ಥಾಪಕ ನಿರ್ದೇಶಕರು, ಸೆಂಟರ್ ಫಾರ್ ಸ್ಟಡೀಸ್ ಇನ್ ಎಜುಕೇಶನ್, ಮಕ್ಕಳ ಮಂಟಪ, ದರ್ಬೆ, ಪುತ್ತೂರು, (ದ. ಕ.)

ಶ್ರೀ ಸುದರ್ಶನ ಕಾರ್ಲೆ, ಪ್ರಸಿದ್ಧ ಉದ್ಯಮಿ, ಕಾರ್ಲೆ ಗಾರ್ಮೆಂಟ್ಸ್,ಬೆಂಗಳೂರು

ಡಾ. ಪುರುಷೋತ್ತಮ್ ಬಿಳಿಮಲೆ, ಡೈರೆಕ್ಟರ್, ಅಮೇರಿಕನ್ ಇನ್ಸ್ಟಿಟ್ಯೂಟ್ ಇಂಡಿಯನ್ ಸ್ಟಡಿ, ನ್ಯೂಡೆಲ್ಲಿ

ಶ್ರೀಮತಿ ಕೂಡಕಂಡಿ ಕಾವೇರಮ್ಮ ಸೋಮಣ್ಣ, ಅಧ್ಯಕ್ಷೆ, ಮಡಿಕೇರಿ ಪುರಸಭೆ

ಇವರು ಭಾಗವಹಿಸಲಿರುವರು

ಶ್ರೀ ದಂಬೆಕೋಡಿ ಆನಂದ ಅಧ್ಯಕ್ಷತೆ ವಹಿಸಲಿರುವರು

ವಿಶೇಷ ಆಹ್ವಾನಿತರು ಶ್ರೀ ಪೂಜಾರಿ ಮೊಣಪ್ಪ, ಶ್ರೀ ತಮ್ಮಪ್ಪ ಗೌಡ, ಶ್ರೀ ಪಿ. ಅನಂತ ರಾಜ್ ಗೌಡ, ಶ್ರೀ ನಂಗಾರು ನಾಣಯ್ಯ, ಶ್ರೀಮಾಜಿ ದಿನಕರ ಗೌಡ, ಶ್ರೀಮತಿ ಕೂಡಕಂಡಿ ಹೊನ್ನಮ್ಮ, ಶ್ರೀ ಜಾಜಿ ಉತ್ತಪ್ಪ, ಶ್ರೀ ಪಿ. ಎಂ. ಕುಶಾಲಪ್ಪ, ಶ್ರೀ ಬಿ. ಚಿನ್ನಪ್ಪ ಗೌಡ. ಮಾನ್ಯ ಸದಸ್ಯರು ಹಾಗೂ ಸಮಾಜದ ಬಂಧು ಬಾಂಧವರು ಸಮಯಕ್ಕೆ ಸರಿಯಾಗಿ ಆಗಮಿಸಿ ಸಮಾರಂಭವನ್ನು ಯಶಸ್ವಿಗೊಳಿಸಬೇಕಾಗಿ ವಿನಂತಿ.

**ಸರ್ವರಿಗೂ ಆದರದ ಸ್ವಾಗತ ಬಯಸುವ**

| ಆಡಳಿತ ಮಂಡಳಿಯ ಸದಸ್ಯರು | ಶ್ರೀ ದಂಬೆಕೋಡಿ ಆನಂದ ಅಧ್ಯಕ್ಷರು | ಶ್ರೀ ನಂಗಾರು ನಿಂಗರಾಜು ಗೌರವ ಕಾರ್ಯದರ್ಶಿ |
|---|---|---|

## ಭಲಬಿಡದ ತ್ರಿವಿಕ್ರಮ

ಬೆಂಗಳೂರಿನ ಕಾವೇರಿ ನಾಡಿನ ನಿರ್ಮಾತೃ ಅಮ್ಮಾಜೀರ ಪೊನ್ನಪ್ಪನವರಿಂದ 'ಕೊಡಗು ವಾಲಗ' ಪೊನಿಧ್ವನಿ ಭಾಗ - 6 ನಾಡಿನ ಜನತೆಗೆ ಸಮರ್ಪಿತ




ದಿನಾಂಕ 25-9-2003 ರಲ್ಲಿ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ತುಂತಜೆ ಗಣೇಶ್‌ನವರು ಮಡಿಕೇರಿಯ ಹೋಟೆಲ್ ಅಮೃತ ಆರ್ಕೆಡ್‌ನಲ್ಲಿ ಬಿಡುಗಡೆ ಗೊಳಿಸಿದರು.

Kodagu Sangathi Kannada Fortnightly Edited, Published, Printed by Pattada Sheelamani, # 12058 "Sangathi Nilaya", Vijayanagar IV Stage, II Phase, Hinkal Post, Mysore - 570017. ☎ : 0821/2404290.
And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/2431792.